Vol - 12 July 2014 Issue No. 07 ₹ 10.00/-






# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*




ಜೂನ್ 2014ರಂದು ಚಿಕ್ಕಬಳ್ಳಾಪುರದ ಬಿ.ಜಿ.ಎಸ್. ವರ್ಲ್ಡ್ ಶಾಲೆಯಲ್ಲಿ ಸ್ಕೌಟ್-ಗೈಡ್ ಘಟಕಗಳನ್ನು ಉದ್ಘಾಟಿಸಲಾಯಿತು. ಆದಿಚುಂಚನಗಿರಿ ಸಂಸ್ಥಾನದ ಜಗದ್ಗುರುಗಳಾದ ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿಯವರು ದಿವ್ಯ ಸಾನಿದ್ಯ ವಹಿಸಿದ್ದರು. ಜಿಲ್ಲಾ ಲೀಸ್ ವರಿಷ್ಠಾಧಿಕಾರಿ ಶ್ರೀಮತಿ ದಿವ್ಯ ಗೋಪಿನಾಥ್, ಶಾಲೆಯ ಪ್ರಾಂಶುಪಾಲರಾದ Ex - ವಿಂಗ್ ಕಮಾಂಡರ್ ಶ್ರೀ ರಂಜಿತ್ ಮಂಡಲ್, ರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕೇಂದ್ರ ಸ್ಥಾನಿಕ ಆಯುಕ್ತ ಶ್ರೀ ಎನ್. ಶ್ರೀನಿವಾಸನ್, ಜಿಲ್ಲಾ ಸಂಘಟಕ ಶ್ರೀ ವಿಶ್ವನಾಥ್ ಇತರರು ಚಿತ್ರದಲ್ಲಿದ್ದಾರೆ.



ಜುಲೈ 2014ರಂದು ಉಡುಪಿಯಲ್ಲಿ ಜರುಗಿದ ಜಿಲ್ಲಾ ಮಟ್ಟದ ರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನೆಯನ್ನು ಶ್ರೀಮತಿ ಶಾಂತಾ ವಿ. ಆಚಾರ್ಯ, ಆಯುಕ್ತರು(ಗೈಡ್ಸ್) ಇವರು ನೆರವೇಸಿದರು. ಶ್ರೀ ಮಂಜುನಾಥಯ್ಯ, ಪಿ ತಾಲ್ಲೂಕು ಇ.ಓ., ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಸಂಸ್ಥೆ ಪೋಷಕರಾದ ಶ್ರೀ ರಬೀಂದ್ರ ನಾಯಕ್, ಜಿಲ್ಲಾ ಸ್ಕೌಟ್ ಆಯುಕ್ತ ಎಡ್ವಿನ್‌ಆಳ್ವ, ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ್ ಪೂಜಾರಿ ಇತರರು ದಲ್ಲಿದ್ದಾರೆ.



9 ಜುಲೈ 2014ರಂದು ಯಾದಗಿರಿ ಜಿಲ್ಲೆಯ ನೂತನ ಜಿಲ್ಲಾಧಿಕಾರಿಗಳಾದ ಶ್ರೀ ಮನೋಜ್ ಜೈನ್, ಭಾ.ಆ.ಸೇ ಅವರನ್ನು ಜಿಲ್ಲಾ ಸಂಸ್ಥೆಯಿಂದ ಸನ್ಮಾನಿಸಲಾಯಿತು. ಚಿತ್ರದಲ್ಲಿ ಶ್ರೀಮತಿ ನಾಗರತ್ನ ಅನಪುರ್, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಸಿ.ಎಂ. ಪಟ್ಟೇದಾರ, ಜಿಲ್ಲಾ ಕಾರ್ಯದರ್ಶಿ, ಶ್ರೀ ರಾಜೇಂದ್ರ, ಜಿಲ್ಲಾ ತರಬೇತಿ ಆಯುಕ್ತ, ಶ್ರೀ ರಾಘವೇಂದ್ರ, ಜಿಲ್ಲಾ ಸಂಘಟನಾ ಆಯುಕ್ತ ಹಾಗೂ ಇತರ ಸ್ಕೌಟ್‌ರ್‌ಗಳು ಚಿತ್ರದಲ್ಲಿದ್ದಾರೆ.




28 ಜೂನ್ 2014ರಂದು ಚಿಕ್ಕಬಳ್ಳಾಪುರದ ಬಿ.ಜಿ.ಎಸ್. ವರ್ಲ್ಡ್ ಶಾಲೆಯಲ್ಲಿ ಜರುಗಿದ ಸ್ಕೌಟ್-ಗೈಡ್ ಘಟಕಗಳ ಉದ್ಘಾಟನೆ ಸಮಾರಂಭದಲ್ಲಿ ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮಿಜಿ ರವರೊಂದಿಗೆ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಇತರರು ಚಿತ್ರದಲ್ಲಿದ್ದಾರೆ.



30 ಜೂನ್ 2014ರಂದು ರಾಯಚೂರು ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆ ಅಧ್ಯಕ್ಷರಾಗಿದ್ದ ಶ್ರೀ ಎಸ್.ಎನ್. ನಾಗರಾಜು, ಭಾ.ಆ.ಸೇ ಇವರು ಸೇವೆಯಿಂದ ನಿವೃತ್ತಿ ಹೊಂದಿದ ಪ್ರಯುಕ್ತ ಜಿಲ್ಲಾ ಸಂಸ್ಥೆಯಿಂದ ಸನ್ಮಾನಿಸಿ ಗೌರವಿಸಲಾಯಿತು. ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳಿದ್ದಾರೆ.




10 ಜುಲೈ 2014ರಂದು ಮೈಸೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸಾರ್ವಜನಿಕ ಶಿಕ್ಷಣ ಅಧಿಕಾರಿಗಳ ಮಾಹಿತಿ ಶಿಬಿರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಮಾತನಾಡುತ್ತಿರುವುದು. ಶ್ರೀ ಹೆಚ್.ಆರ್. ಬಸಪ್ಪ, ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಪಿ. ವಿಶ್ವನಾಥ್, ಡಿ.ಸಿ.ಸಿ., ಜಿಲ್ಲಾ ಆಯುಕ್ತರುಗಳಾದ ಶ್ರೀ ಅಬ್ದುಲ್ ಜಮೀಲ್ ಹಾಗೂ ಡಾ. ಜೆ. ಕಮಲಾರಾಮನ್ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ದಿನಾಂಕ 4 ರಿಂದ 10 ಜುಲೈ 2014ರವರೆಗೆ ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರದಲ್ಲಿ ಜರುಗಿದ ಗೈಡ್ ಕ್ಯಾಪ್ಟನ್ ಹಿಮಾಲಯ ವೃಕ್ಷಮಣಿದಾರಕರ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ತರಬೇತುದಾರರು ಹಾಗೂ ಸಿಬ್ಬಂಧಿವರ್ಗ.



15 ರಿಂದ 19 ಜುಲೈ 2014ರ ವರೆಗೆ ಕೊಂಡಜ್ಜಿ ಬಸಪ್ಪ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿಯಲ್ಲಿ ಜರುಗಿದ ರಾಜ್ಯ ಮಟ್ಟದ ರೋವರ್ ಸಖ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್‌ಗಳು.



09 ಜುಲೈ 2014 ರಂದು ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರಿನ ಸ್ವಾಮಿ ವಿವೇಕಾನಂದ ಶಾಲೆಯಲ್ಲಿ ಜರುಗಿದ ಜಲಜಾಗೃತಿ ಜಾಥಾವನ್ನು ಸುದ್ದಿಬಿಡುಗಡೆ ದಿನಪತ್ರಿಕೆ ಪ್ರಧಾನ ಸಂಪಾದಕ ಶ್ರೀ ಕರುಣಾಕರ ರೈ ಸಿ.ಎಚ್ ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು. ಚಿತ್ರದಲ್ಲಿ ತಾಲೂಕು ದೈಹಿಕ ಶಿಕ್ಷಣ ನಿರ್ದೇಶಕ ಶ್ರೀ ಸುಂದರ ಗೌಡ, ಸಂಚಾಲಕರಾದ ಶ್ರೀ ರವೀಂದ್ರ ಪಿ., ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀಮತಿ ವಿದ್ಯಾ ಆರ್. ಗೌರಿ ಹಾಗೂ ಇತರರನ್ನು ಕಾಣಬಹುದು.

# *EDITORIAL............*

Young people are the main players in this non-formal educational process that also requires adequate Adult Support, usually provided by adult volunteers. If we accept the truth as told in the policy of WOSM, every adult should limit his own involvement in the process of progressive Scouting/ Guiding by giving more space and allowing young people to come out to explore the values and ethics of Scout / Guide movement with innovative ideas and their own commitment.

On the other hand, who are adult volunteers? I think they are also young and energetic youth who can really play the role of facilitators and promoters of young people to play the main role in our movement. The leaders who have attained certain age, or who have become quite in-capable of doing physical activities, or those who need others support to their own daily course should step aside by paving way for new generations to take over.

For instance we have many leaders who are occupying the positions for decades, whether they do their job well or not, they satisfy youth or not, they have vision for better Scouting/ Guiding or not they need positions for ever. Such leaders should accept the trends and step out of the positions they are holding before the movement they are leading loses its charm and inertia.

What I am trying to say is - either you as a adult leader / volunteer in the movement move ahead and leave the space for youth to step in to your place, or if you are unable / can't manage to progress further or march ahead simply step aside. This shows the real spirit of Scouting/ Guiding. Before we become burden on the movement, let us show by our own actions, our love for the movement is real and value based, meaning when we know we can't, we should be one of the volunteer who allows others to grow.

All the while having fun, because – in the words of Lady Olave Baden-Powell- "If it isn't fun, it isn't scouting" and so by accepting the reality let us enjoy fun by looking at youth and young adults playing the Scouting /Guiding having real fun.

I wish everyone in the movement understand the concept of adult volunteers and come out at the right time, at the right moment. Let us not forget that each person is born with a unique potential which can be developed in a constructive direction for better Scouting/ Guiding in the world for attracting youth and young people.

*M.A. KHALID*
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಆತ್ಮೀಯರೇ,

ಕಳೆದ ಆರು ದಶಕಗಳಿಗೂ ಹೆಚ್ಚು ಕಾಲ ಸಮಾಜಮುಖಿ ಕರ್ತವ್ಯಗಳಲ್ಲೆ ಸದಾ ನಿರತರಾಗಿರುವ, ರಾಜ್ಯದ ಹಿರಿಯ ಜಾನಪದ ವಿದ್ವಾಂಸರೂ, ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ಭಾರತ್ ಸ್ಕೌಟ್ಸ್-ಗೈಡ್ಸ್ ಚಳವಳಿಯ ನಾಲ್ಕು ದಶಕಗಳ ಎಲ್ಲಾ ಪ್ರಕಟಣೆಗಳ ಮಾರ್ಗದರ್ಶಕರಾಗಿರುವ, ಹಿರಿಯ ಕ್ರಿಯಾತ್ಮಕ ಚೇತನ, ನಮ್ಮೆಲ್ಲರ ಗೌರವದ ಮಾರ್ಗದರ್ಶಕ ಗೊ.ರು.ಚ. ಅವರು 85ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ ಶುಭ ಸಂದರ್ಭದಲ್ಲಿ ಗೊರುಚ ಅಭಿನಂದನ ಸಮಿತಿಯವರು ದಿನಾಂಕ 20 ಜುಲೈರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಅತ್ಯಂತ ಸಂಭ್ರಮ, ಸಡಗರ, ಉತ್ಸಾಹದಿಂದ ಗೊರುಚ ಅವರನ್ನು ಅಭಿನಂದಿಸಿ ಗೌರವಿಸಲಾಯಿತು.

ಕಿಕ್ಕಿರಿದು ತುಂಬಿದ್ದ ರವೀಂದ್ರ ಕಲಾಕ್ಷೇತ್ರದಲ್ಲಿ ಬೆಳಿಗ್ಗೆಯಿಂದ ರಾತ್ರಿವರೆವಿಗೆ ವಚನಗಾಯನ, ಜಾನಪದ ಗೀತೆಗಳ ಸಂಭ್ರಮ, ಹೃದಯ ಸ್ಪರ್ಶಿ ಗೊರುಚ ದಂಪತಿಗಳ ಅಭಿನಂದನೆ, ನಾಡಿನ ಹಿರಿಯ ಗುರುಗಳಿಂದ, ಮಂತ್ರಿಮಹನೀಯರುಗಳಿಂದ, ವಿದ್ವಾಂಸರುಗಳಿಂದ ನುಡಿನಮನ, ಗೊರುಚ ಅವರಿಗೆ ರೂ. 11,11,111/- (ಹನ್ನೊಂದು ಲಕ್ಷದ ಹನ್ನೊಂದು ಸಾವಿರದ ನೂರಾಹನ್ನೊಂದು ರೂಪಾಯಿಗಳು) ಲಕ್ಷಗಳ ಗೌರವ ಸಮರ್ಪಣೆ, ಗೊರುಚ ಅವರು ಆರು ದಶಕಗಳಿಂದ ಬರೆದ ಮುನ್ನುಡಿಗಳು, ರೇಡಿಯೋ ಹಾಗೂ ದೂರದರ್ಶನದ ಚಿಂತನೆಗಳು, ಮಹಾಮನೆಯ ಪ್ರತಿ ತಿಂಗಳ ಅಧ್ಯಕ್ಷರ ನುಡಿ, ಆಡಿದ ಮಾತುಗಳು, ಹಾರೈಕೆ, ಚಿತ್ರ ಸಂಪುಟ, ಗೊರುಚ ಅಭಿನಂದನೆ ಸಂದರ್ಭದಲ್ಲಿ ಬಿಡುಗಡೆಗೊಂಡ "ಹಳ್ಳಿಯ ಬಳ್ಳಿ" ಸಂದರ್ಭ ಸಂಚಿಕೆ, ಗೊರುಚ ಅವರಿಗೆ ಅತ್ಯಂತ ಪ್ರಿಯವಾದ ಜಾನಪದ ಸಾಹಿತ್ಯ, ಶರಣ ಸಾಹಿತ್ಯ, ಸಾಮಾಜಿಕ ಕಳಕಳಿ ಬಗ್ಗೆ ಪ್ರಕಟಿಸಿರುವ ಅಭಿನಂದನಾ ಗ್ರಂಥ "ತವನಿಧಿ" ಹಾಗೂ ಗೊರುಚ ಸಂಕ್ಷಿಪ್ತ ಪರಿಚಯ ಪುಸ್ತಿಕೆಗಳು ಬಿಡುಗಡೆಗೊಂಡ ಎಂಟು ಪ್ರಕಟಣೆಗಳು ಗೊರುಚ ಅವರ ಆರುದಶಕಗಳಿಗೂ ಮಿಕ್ಕ ಕ್ರಿಯಾಶೀಲ ಬದುಕನ್ನು ಅನಾವರಣಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ಗೊರುಚ ಅವರ ಸೇವೆ ಸದಾ ನಾಡಿಗೆಲ್ಲಾ ಲಭಿಸಲಿ, ನೂರ್ಕಾಲ ಬಾಳಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ದೊಡ್ಡಬಳ್ಳಾಪುರದ ಡಾ|| ಅನಿಬೆಸೆಂಟ್ ಸ್ಕೌಟ್ಸ್ ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಆಗಸ್ಟ್‌ನಲ್ಲಿ ಆಯೋಜಿಸಿರುವ 27ನೇ ರಾಜ್ಯ ಜಾಂಬೋರೇಟ್‌ಗೆ ಅವಶ್ಯವಾದ ಅನುಕೂಲಗಳು ಸಿದ್ಧವಾಗುತ್ತಿದೆ.

ದಿನಾಂಕ 19 ಜುಲೈ 2014ರಂದು ಸ್ವಾಗತ ಸಮಿತಿಯ ಸಭೆ ದೊಡ್ಡಬಳ್ಳಾಪುರ ಕ್ಷೇತ್ರದ ಶಾಸಕರಾದ ಮಾನ್ಯ ಶ್ರೀ ಟಿ.ವೆಂಕಟರಮಣಯ್ಯ ಅವರ ಅಧ್ಯಕ್ಷತೆಯಲ್ಲಿ ಡಾ|| ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿತು. ಕ್ಷೇತ್ರದ ಜಿಲ್ಲಾ ಪಂಚಾಯತ್ ಸದಸ್ಯರು, ದೊಡ್ಡಬಳ್ಳಾಪುರ ತಾಲ್ಲೂಕು ಪಂಚಾಯತ್ ಅಧ್ಯಕ್ಷರು, ಕ್ಷೇತ್ರದ ತಾಲ್ಲೂಕು ಪಂಚಾಯತ್ ಸದಸ್ಯರು, ದೊಡ್ಡಬಳ್ಳಾಪುರ ತಾಲ್ಲೂಕಿನ ವಿವಿಧ ಸರ್ಕಾರಿ ಇಲಾಖೆಗಳ ಅಧಿಕಾರಿಗಳು, ಬಾಶೆಟ್ಟಿಹಳ್ಳಿ ಗ್ರಾಮ ಪಂಚಾಯತ್ ಅಧಿಕಾರಿಗಳು, ರಾಜ್ಯ ಸಂಸ್ಥೆಯ ಹಿರಿಯ ನಾಯಕ-ನಾಯಕಿಯರು ಸಭೆಯಲ್ಲಿ ಭಾಗವಹಿಸಿ ಜಾಂಬೋರೇಟ್ ಕಾರ್ಯಕ್ರಮ ಯಶಸ್ವಿಯಾಗಿ ಜರುಗಿಸಲು ಬೇಕಾಗುವ ಅನುಕೂಲಗಳನ್ನು ಏರ್ಪಡಿಸಲು ಸಂಪೂರ್ಣ ಸಹಾಯ-ಸಹಕಾರ ನೀಡುವುದಾಗಿ ಭರವಸೆ ನೀಡಿರುತ್ತಾರೆ. ಅವರುಗಳಿಗೆಲ್ಲಾ ರಾಜ್ಯ ಸಂಸ್ಥೆಯ ಕೃತಜ್ಞತೆಗಳು.

ದಿನಾಂಕ : 10.07.2014ರಂದು ಮೈಸೂರು ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಮತ್ತು ಗೈಡ್ ಭವನದಲ್ಲಿ ಏರ್ಪಡಿಸಿದ "ಸಾಮಾನ್ಯ ಮಾಹಿತಿ ಶಿಬಿರ"ದ ಉದ್ಘಾಟನೆಯಲ್ಲಿ ಭಾಗವಹಿಸಿ ಸಭೆಯಲ್ಲಿ ಭಾಗವಹಿಸಿದ್ದ ಎಲ್ಲರನ್ನು ಸ್ಕೌಟ್ ಗೈಡ್ ಚಳವಳಿ ಮೈಸೂರು ಜಿಲ್ಲೆಯಾದ್ಯಂತ ಹೆಚ್ಚಿಸಲು ಅವರುಗಳ ಸಹಾಯ, ಸಹಕಾರವನ್ನು ಜಿಲ್ಲಾ ಸಂಸ್ಥೆಯ ಪರವಾಗಿ ಕೋರಿದ್ದೇನೆ.

ಸಾರ್ವಜನಿಕ ಶಿಕ್ಷಣ ಇಲಾಖೆಯ ಆಡಳಿತ ಉಪನಿರ್ದೇಶಕರಾದ ಶ್ರೀ ಹೆಚ್.ಆರ್.ಬಸಪ್ಪನವರು ಮಾಹಿತಿ ಶಿಬಿರದಲ್ಲಿ ಸಕ್ರಿಯವಾಗಿ ಭಾಗವಹಿಸಿ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಭಾಗವಹಿಸಿದ್ದ 175ಕ್ಕೂ ಹೆಚ್ಚಿನ ಅಧಿಕಾರಿಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ, ಅವರುಗಳ ವ್ಯಾಪ್ತಿಯಲ್ಲಿ ಸ್ಕೌಟ್-ಗೈಡ್ ದಳ-ಘಟಕಗಳನ್ನು ಸ್ಥಾಪಿಸಲು ಕಾರ್ಯಪ್ರವೃತ್ತರಾಗಬೇಕೆಂದು ಸೂಚಿಸಿದರು. ನನ್ನ ಗಮನಕ್ಕೆ ಬಂದ ವಿಷಯವೆಂದರೆ, ಇತರ ಎಲ್ಲಾ ಅಭ್ಯರ್ಥಿಗಳೊಂದಿಗೆ ಜಿಲ್ಲಾ ಉಪನಿರ್ದೇಶಕರು ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಾಮಾನ್ಯ ಮಾಹಿತಿ ಶಿಬಿರದಲ್ಲಿ ದಿನವಿಡಿ ಭಾಗವಹಿಸಿ ಶಿಬಿರ ಅತ್ಯಂತ ಯಶಸ್ವಿಯಾಗಲು ಸಹಕರಿಸಿದ್ದಕ್ಕೆ ಅವರುಗಳಿಗೆ ರಾಜ್ಯ ಹಾಗು ಜಿಲ್ಲಾ ಸಂಸ್ಥೆಗಳ ಪರವಾಗಿ ಧನ್ಯವಾದವನ್ನು ಅರ್ಪಿಸುತ್ತೇನೆ. ಸಭೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಪಿ.ವಿಶ್ವನಾಥ್, ಜಿಲ್ಲಾ ಆಯುಕ್ತರುಗಳಾದ ಡಾ॥ ಕಮಲಾರಾಮನ್, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿ ಡಾ॥ ಕೆ.ಬಿ.ಗುರುಮೂರ್ತಿ, ಜಿಲ್ಲಾ ಕೋಶಾಧಿಕಾರಿ **ಡಾ॥ ಜಿ.ಸಿದ್ದೇಶ್**, ರಾಜ್ಯ ಸಂಸ್ಥೆಯ ಪ್ರತಿನಿಧಿಗಳಾದ ಶ್ರೀಮತಿಯರಾದ ಎಸ್.ಕೆ. ಪ್ರಭಾ, ಬಿ.ಡಿ.ಶಾಂತಾ, ಶ್ರೀ ಟಿ.ಎ. ಮಂಜುನಾಥಾಚಾರ್, ಶ್ರೀ ಎಲ್.ಟಿ. ಲೋಕೇಶ್ ಕಾರ್ಯಕ್ರಮದಲ್ಲಿ ಭಾಗವಹಿಸಿ ಸೂಕ್ತ ಮಾರ್ಗದರ್ಶನ ನೀಡಿರುತ್ತಾರೆ. ಇದರೊಂದಿಗೆ ಜಿಲ್ಲಾ ಸಂಸ್ಥೆಯ ತರಬೇತುದಾರರು, ಡಿಓಸಿಗಳು, ಸ್ಥಾನಿಕ ಆಯುಕ್ತರುಗಳು, ಸಹಕಾರ್ಯದರ್ಶಿಗಳು, ಶಿಬಿರದ ಯಶಸ್ಸಿಗೆ ನೆರವಾದರು. ಮೈಸೂರು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ, ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಅಧಿಕಾರಿಗಳಿಗೆ ಮತ್ತೊಮ್ಮೆ ರಾಜ್ಯ ಸಂಸ್ಥೆಯ ಪರವಾಗಿ ಅಭಿನಂದನೆಗಳು.

ದಿನಾಂಕ 1 ಆಗಸ್ಟ್ ನಿಂದ 7 ರ ವರೆಗೆ ಶ್ರೀಲಂಕಾದ ಕೊಲೊಂಬೋದ ಮಡಂಪೆನಗರದಲ್ಲಿ ಏರ್ಪಡಿಸಿರುವ ಕೊಲೊಂಬೋ ಶತಮಾನೋತ್ಸವ ಸ್ಕೌಟ್ ಜಾಂಬೋರಿಯಲ್ಲಿ ರಾಜ್ಯದ ಬೆಂಗಳೂರು ದಕ್ಷಿಣ ಮತ್ತು ಉತ್ತರ ಜಿಲ್ಲೆಗಳಿಂದ 26 ಸ್ಕೌಟ್‌ಗಳು, 31 ಗೈಡ್‌ಗಳು, 10 ಐ.ಎಸ್.ಟಿ.ಗಳು ಹಾಗೂ 5 ಜನ ದಳನಾಯಕ-ನಾಯಕಿಯರುಗಳು ಭಾಗವಹಿಸಲಿದ್ದಾರೆ. ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಕೆ. ಖಾನ್‌ರವರ ನೇತೃತ್ವದಲ್ಲಿ ರಾಜ್ಯದ ಕಂಟಿಂಜೆಂಟ್ ಭಾಗವಹಿಸಲಿದೆ. ರಾಜ್ಯದಿಂದ ಹೆಚ್ಚಿನ ಸಂಖ್ಯೆಯಲ್ಲಿ ಶ್ರೀಲಂಕಾದ ಶತಮಾನೋತ್ಸವ ಜಾಂಬೋರಿಯಲ್ಲಿ ಭಾಗವಹಿಸಿಲಿರುವ ಎಲ್ಲಾ ಸ್ಕೌಟ್ಸ್-ಗೈಡ್ಸ್ ದಳನಾಯಕ-ನಾಯಕಿಯರುಗಳಿಗೆ ಹಾರ್ದಿಕ ಶುಭಾಶಯ ಹಾಗೂ ಅಭಿನಂದನೆಗಳು.

ಹಿಂದಿನ ಸಂಚಿಕೆಗಳಲ್ಲಿ ರಾಜ್ಯದ ಸಹೋದ್ಯೋಗಿಗಳಲ್ಲಿ ನಾನು ಈಗಾಗಲೇ ಪ್ರಸ್ತಾಪಿಸಿರುವಂತೆ, ಯಾವ ಜಿಲ್ಲೆಗಳಲ್ಲಿ ಹಿಂದಿನ ವರ್ಷಗಳಲ್ಲಿ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲು ಸಾಧ್ಯವಾಗಲಿಲ್ಲವೋ ಅವರುಗಳು ತಕ್ಷಣವೇ ನಿಮ್ಮ ಜಿಲ್ಲಾ ಸಂಸ್ಥೆಗಳಲ್ಲಿ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ರಾಜ್ಯ ವಾರ್ತೆಗಳು................

## ರಾಜ್ಯ ಮಟ್ಟದ ರೋವರ್ ಸಖ ತರಬೇತಿ ಶಿಬಿರ

ದಿನಾಂಕ 15-07-2014 ರಿಂದ 19-07-2014 ರ ವರೆಗೆ ಐದು ದಿನಗಳ ರಾಜ್ಯ ಮಟ್ಟದ ರೋವರ್ ಸಖ ತರಬೇತಿ ಶಿಬಿರವು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ ಇಲ್ಲಿ ಏರ್ಪಡಿಸಲಾಗಿತ್ತು.

ರೋವರ್‌ಗಳನ್ನು ನಾಲ್ಕು ಗುಂಪುಗಳಾಗಿ ವಿಭಾಗಿಸಲಾಯಿತು. ಮೊದಲ ಗುಂಪಿನ ನಾಯಕರಾಗಿ ಶ್ರೀ ಗಣಪತಿ, ಆರ್.ಎಸ್.ಎಲ್., ಸಾಗರ, ಎರಡನೇ ಗುಂಪಿನ ನಾಯಕರಾಗಿ ಶ್ರೀ ಎ.ವಿ., ರಾಜೇಶ್ ಆರ್. ಎಸ್. ಎಲ್. ಶಿವಮೊಗ್ಗ, ಶ್ರೀ ಡೊಂಬಯ್ಯ ಮಣಿಪಾಲ, ಮೂರನೇ ಗುಂಪಿನ ನಾಯಕರಾಗಿ ಶ್ರೀ ಎಂ.ಕೆ. ರಂಗಸ್ವಾಮಿ ಆರ್.ಎಸ್.ಎಲ್., ಹಾಸನ ನಾಲ್ಕನೇ ಗುಂಪಿನ ನಾಯಕರಾಗಿ ಶ್ರೀ ಅಶೋಕ ಕುಮಾರ್ ಡಿ.ಓ., ಮೈಸೂರು ಇವರುಗಳು ಕರ್ತವ್ಯ ನಿರ್ವಹಿಸಿದರು.

ಶಿಬಿರದ ತರಬೇತಿಯಲ್ಲಿ ಶಿಬಿರದ ಉದ್ದೇಶಗಳು, ರೋವರ್ ಸ್ಕೌಟ್ ವಿಭಾಗದ ಆದರ್ಶ ಕಾರ್ಯಕ್ರಮ, ರೋವರ್ ಸ್ಕೌಟಿಂಗ್ ಸೇರುವುದು ಹೇಗೆ?, ರೋವರ್ ತತ್ವಗಳು, ರೋವರ್ ಪ್ರಾವೀಣ್ಯತಾ ಪದಕಗಳು, ರೋವರ್ ಇತಿಹಾಸ, ನಡೆದು ಬಂದ ದಾರಿ, ನಾಯಕತ್ವ ಬೆಳೆಸುವುದು, ಸ್ಕೌಟ್ಸ್ ತತ್ವ, ಪಟಾಲಂ ಮತ್ತು ಅದರ ವ್ಯವಸ್ಥೆ, ಬಿ.ಪಿ. ಯವರ ಆರು ವ್ಯಾಯಾಮಗಳು, ಗಂಟುಗಳು ಮತ್ತು ಅದರ ಉಪಯೋಗಗಳು, ರೋವರ್‌ಗಳ ಪ್ರಗತಿಪರ ಶಿಕ್ಷಣ, ಲಾಗ್ ಪುಸ್ತಕಗಳನ್ನು ಸಿದ್ಧಗೊಳಿಸುವುದು, ದಳ ಸಭೆ, ಕೊಂಡಜ್ಜಿ ಗ್ರಾಮ ಮತ್ತು ಶಿಬಿರ ಕೇಂದ್ರದಲ್ಲಿ ಸ್ವಚ್ಛತೆ, ಶಿಬಿರ ಕೇಂದ್ರದಲ್ಲಿ ನೂರು ಗಿಡಗಳನ್ನು ನೆಡುವುದು ಮುಂತಾದ ಕಾರ್ಯಚಟುವಟಿಕೆಗಳನ್ನು ನಡೆಸಲಾಯಿತು.

ದಿನಾಂಕ 17-07-2014 ರ ಅಪರಾಹ್ನ ವಿವಿಧ ಪ್ರದೇಶಗಳಿಗೆ ರಾತ್ರಿ ವಾಸದ ಹೊರ ಸಂಚಾರವನ್ನು ಯೋಜಿಸಲಾಗಿತ್ತು. ಒಂದು ದಿನದ ರಾತ್ರಿಗೆ ಬೇಕಾದ ಆಹಾರ ಸಾಮಗ್ರಿಗಳನ್ನು ಪ್ರತಿ ಗುಂಪಿಗೆ ನೀಡಲಾಯಿತ. ಪ್ರತಿ ತಂಡವು ನಾಲ್ಕು ಗಂಟೆಗೆ ಶಿಬಿರ ಕೇಂದ್ರದಿಂದ ಅರಣ್ಯ ಇಲಾಖೆಯ ತುಂಗಭದ್ರಾ ಜಲಾಶಯದ ಕೊಂಡಜ್ಜಿ ಕೆರೆಯತ್ತ ಹೊರಸಂಚಾರವನ್ನು ಆರಂಭಿಸಿದವು. ಹೊರಸಂಚಾರ ಹೊರಡುವ ಮುನ್ನ ಪ್ರತಿಯೊಂದು ತಂಡಕ್ಕೆ ನಿರ್ದಿಷ್ಠ ಕೆಲಸಗಳನ್ನು ಹಂಚಲಾಯಿತು. ಪ್ರತಿ ತಂಡವು ಪ್ರಾಣಿಗಳ ಗುರುತು ಪತ್ತೆ, ಕಾಡಿನ ಮಧ್ಯೆ ರಾತ್ರಿ ಉಳಿದು ಖುಷಿ ಪಟ್ಟರು. ಹುಲಿ ನಾಯಿ, ನವಿಲು ಜಿಂಕೆ ಕಾಲುಗಳ ಅಚ್ಚುಗಳನ್ನು ಮಕ್ಕಳು ಪತ್ತೆ ಹಚ್ಚಿ, ಅರಣ್ಯ ಕೌಶಲಗಳನ್ನು ಅರಿಯುವ ಪ್ರಯತ್ನವನ್ನು ಮಾಡಿದರು. ಆ ರಾತ್ರಿಯನ್ನು ಕಾಡಿನ ಮಧ್ಯೆ ರಚಿಸಿಕೊಂಡ ಗುಡಾರಗಳಲ್ಲಿ ಕಳೆದರು.

ಶಿಬಿರದ ನಾಯಕತ್ವವನ್ನು ಶ್ರೀ ಎ.ಎಂ. ಶಂಕರ್, ಎಲ್.ಟಿ. (ರೋವರ್), ಇವರು ವಹಿಸಿದ್ದರು. ಶಿಬಿರದ ಮೇಲ್ವಿಚಾರಕರಾಗಿ ಶ್ರಿ ಟಿ.ಎ. ಮಂಜುನಾಥಾಚಾರ್ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಕಾರ್ಯ ನಿರ್ವಹಿಸಿದರು. ಶಿಬಿರದ ಆಹಾರ ವ್ಯವಸ್ಥೆಯನ್ನು ಶ್ರೀ ನೂರುಲ್ಲಾ ಎ.ಎಸ್.ಓ.ಸಿ.,(ಸ್ಕೌಟ್ಸ್) ದಾವಣಗೆರೆ ಜಿಲ್ಲೆ ಮತ್ತು ಶ್ರೀ ಎಸ್.ಎನ್. ಗೋಪಾಲಕೃಷ್ಣ, ಡಿ.ಓ. ಶಿರಸಿ ಜಿಲ್ಲೆ ಇವರುಗಳು ನಿರ್ವಹಿಸಿದರು.

ದಿನಾಂಕ 19-07-2014 ರಂದು ಸರ್ವಧರ್ಮ ಪ್ರಾರ್ಥನೆ, ಟ್ರಾಂಜಾಕ್ಷನಲ್ ಅನಾಲಿಸಿಸ್, ರೋವರಿಂಗ್‌ಗೆ ಸಂಬಂಧಿಸಿದ ಸಾಹಿತ್ಯವನ್ನು ಎಲ್ಲಾ ರೋವರ್ ಸಖರುಗಳಿಗೆ ಉಚಿತವಾಗಿ ನೀಡಲಾಯಿತು.

# Himalaya Wood Badge Course

Himalaya Wood Badge Course for Guide Captains was conducted at Dr. Annie Besant Scouts and Guides, State Training and Camping Centre, Doddaballapur, Bangalore Rural District held from 4th to 10th July 2014. 50 Guide Captains were attended the Course, They were divided into 2 Groups - Smt. Sheela Joseph, LT(G), Kerala State and Smt. C. Manjula, LT(G) & I/c, SOC(G) Bangalore were Course Leaders.

Sri Kondajji B. Shanmukhappa, State Chief Commissioner, Smt. Geetha Nataraj, LT(G) National Head Quarters Commissioner for Rangers of State Head Quarters Commissioner, Sri C.S. Reddy, LT(S) and National Council Member, Smt. B.V. Ramalatha, Joint State Secretary (G) visited the Camp on 09-07-2014



TIMES CITY

HEROES WHO TOOK A BULLET FOR US

TOI

UNDYING MEMORIES: Scouts and Guides cadets pay tribute to martyrs at Rashtriya Sainik Smarak on the Indira Gandhi Musical fountain premises, Chowdaiah Road, marking the 15th Kargil Vijay Diwas on Saturday. The three-month-long conflict between India and Pakistan took place between May and July 1999 when infiltrators from Pakistan attacked Indian soldiers at the Line of Control; 527 Indian soldiers lost their lives

ಕೃಪೆ : ದಿ ಟೈಮ್ಸ್ ಆಫ್ ಇಂಡಿಯಾ, ದಿನಾಂಕ : 27-07-2014 ಭಾನುವಾರ

# ಜಿಲ್ಲಾ ವಾರ್ತೆಗಳು.................

## ಕೋಲಾರ

ದಿನಾಂಕ 05-06-2014 ರಂದು ಸರ್ಕಾರಿ ಪದವಿಪೂರ್ವ ಕಾಲೇಜು, ಸೋಮಯಾಜಲಹಳ್ಳಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆಯಲ್ಲಿ ಭಗತ್ ಸಿಂಗ್ ಸ್ಕೌಟ್ ದಳದ ವತಿಯಿಂದ ಗಿಡ ನೆಡುವ ಕಾರ್ಯಕ್ರಮವನ್ನು ನೆರವೇರಿಸಲಾಯಿತು. ನಂತರ ನಡೆದ ಸರಳ ಸಮಾರಂಭದಲ್ಲಿ ವಿಜ್ಞಾನ ಶಿಕ್ಷಕರಾದ ಶ್ರೀ ಸಿ.ಕೆ. ಗೋಪಾಲರಾವ್ ರವರು ವಿಶ್ವ ಪರಿಸರ ದಿನಾಚರಣೆ ಆಚರಣೆಯ ಇತಿಹಾಸ, ಮಹತ್ವ ಈ ವರ್ಷದ ಘೋಷವಾಕ್ಯವಾದ 'Rise your voice, not to the Ocean level' ವಿಷಯಕ್ಕೆ ಸಂಬಂಧಿಸಿದಂತೆ ನಾವು ಎದುರಿಸುತ್ತಿರುವ ಜಾಗತಿಕ ಸಮಸ್ಯೆಗಳಾದ – ಜಾಗತಿಕ ತಾಪಮಾನ ಏರಿಕೆ, ಓಝೋನ್ ಪದರದ ನಾಶ, ಹಾಗೂ ಇದನ್ನು ನಿಯಂತ್ರಿಸಲು ನಾವು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ತಿಳಿಸಿಕೊಟ್ಟರು.

## ಬಿಜಾಪುರ

ದಿನಾಂಕ 26-06-2014 ರಂದು ಮದರ್ ಥೆರೇಸಾ ಗೈಡ್ ಕಂಪನಿ, ಉತ್ನಾಳ ಶಾಲೆಯ ಗೈಡ್ ಗಳು ಕಲ್ಪನಾ ಚಾವ್ಲಾ ಗೈಡ್ ಕಂಪನಿ ಮತ್ತು ಶ್ರೀ ರಾಮಕೃಷ್ಣ ವಿದ್ಯಾವಸತಿ ಶಾಲೆ ವಿಜಾಪುರದಗೈಡ್‌ಗಳು ಶ್ರೀಮತಿ ವಾಸಂತಿಬಾಯಿ ಜಿಗಜಿನ್ನಿ ಜಿಲ್ಲಾ ತರಬೇತಿ ಮತ್ತು ಶಿಬಿರ ಕೇಂದ್ರ ಬುರಣಾಪೂರದಲ್ಲಿ ಗಿಡಗಳನ್ನು ನೆಡುವುದರ ಮೂಲಕ ಪರಿಸರ ಕಾಳಜಿ ಮೆರೆದರು. ಒಟ್ಟು 160 ಗಿಡಗಳನ್ನು ನೆಟ್ಟು ಅವುಗಳಿಗೆ ನೀರು ಹಾಕಿ ಪ್ರತಿ ತಿಂಗಳು ಅದರ ಕಾಳಜಿ ಮಾಡುವ ಜವಾಬ್ದಾರಿ ಹೊತ್ತುಕೊಂಡರು. ನಗರದ ರೈಲು ನಿಲ್ದಾಣದ ಸ್ವಚ್ಛತಾ ಕಾರ್ಯಕ್ರಮವನ್ನು ಇದೇ ಸಂದರ್ಭದಲ್ಲಿ ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಸಂಘಟನಾ ಆಯುಕ್ತರುಗಳಾದ ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ ಅವರು ಮಾರ್ಗದರ್ಶನ ಮಾಡಿದರು. ಗೈಡ್ಸ್ ಕ್ಯಾಪ್ಟನ್‌ಗಳಾದ ಶ್ರೀಮತಿ ಎಲ್.ಎಂ. ಬಿರಾದಾರ, ಶ್ರೀಮತಿ ಸಂಧ್ಯಾ ದೇಶಪಾಂಡೆ, ಶ್ರೀ ಬಿ.ಎಚ್. ಹೂಗಾರ, ಉತ್ನಾಳ ಶಾಲೆಯ ಮುಖ್ಯ ಗುರುಗಳಾದ ಶ್ರೀ ಬಿ.ಎಸ್. ನದಾಫ್ ಉಪಸ್ಥಿತರಿದ್ದರು.

**********

ಸ್ಕೌಟ್ಸ್ ಮತ್ತು ಗೈಡ್ಸ್ ಅಂತರರಾಷ್ಟ್ರೀಯ ಮಟ್ಟದ ಸಂಸ್ಥೆಯಾಗಿದ್ದು, ಮಕ್ಕಳ ಸಲುವಾಗಿ ಸೇವೆ ಮಾಡಲು ಅವಕಾಶ ಒದಗಿ ಬಂದಿದ್ದು ನನಗೆ ಸಂತೋಷ ಉಂಟುಮಾಡಿದೆ ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪುರದ ನೂತನ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಸಕ್ರಿ ಹೇಳಿದರು.

ಅವರು ಇತ್ತೀಚೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಾಲಯದಲ್ಲಿ 2014-15 ನೇ ಸಾಲಿನಲ್ಲಿ ನಡೆದ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾದ ನಂತರ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಾ ಬುರಣಾಪುರದಲ್ಲಿ 15 ಎಕರೆ ಜಿಲ್ಲಾ ತರಬೇತಿ ಕೇಂದ್ರ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದು ಅದನ್ನು ಎಲ್ಲರ ಸಹಾಯದಿಂದ ಶೀಘ್ರದಲ್ಲಿ ಕೆಲಸ ಮುಗಿಸಿ ಉದ್ಘಾಟನೆ ಮಾಡುವ ಜವಾಬ್ದಾರಿ ನಮ್ಮೆಲ್ಲರ ಮೇಲೆ ಇದೆ. ಅದೆ ತೆರನಾಗಿ ತರಬೇತಿ ಕೇಂದ್ರದಲ್ಲಿ ಈಗಾಗಲೇ 700 ಗಿಡಗಳನ್ನು ನೆಡಲಾಗಿದ್ದು ಈ ವರ್ಷಕ್ಕೆ ಹಣ್ಣಿನ ಗಿಡಗಳು ಸೇರಿದಂತೆ ಇನ್ನೂ 1000 ಗಿಡಗಳು ನೆಡುವ ಗುರಿ ಹೊಂದಲಾಗಿದ್ದು ಶೀಘ್ರದಲ್ಲೆ ಆ ಕಾರ್ಯವಾಗಲು ನಾವು ಸಿದ್ಧರಾಗಬೇಕಿದೆ ಮತ್ತು 40 ಟೆಂಟ್‌ಗಳು ಮತ್ತು 40 ಟೆಂಟೆ ಬೇಸಗಳನ್ನು ಮಾಡಬೇಕಿದೆ, ಜಿಲ್ಲಾ ಪಂಚಾಯತಿಯಿಂದ 25 ಶೌಚಾಲಯ ಮತ್ತು ಸ್ನಾನದ ಕೋಣೆಗಳನ್ನು ಮಾಡಬೇಕಿದೆ ಈ ಎಲ್ಲ ಕೆಲಸಗಳನ್ನು ಮಾಡಲು ಜಿಲ್ಲಾ ಹಂತದ ಎಲ್ಲ ಪದಾಧಿಕಾರಿಗಳ ಸಹಾಯ ಸಹಕಾರ ಮುಖ್ಯವಾಗಿ ಬೇಕಾಗಿದೆ ಎಂದು ಹೇಳಿದರು. ನನ್ನನ್ನು ಅವಿರೋಧವಾಗಿ ಆಯ್ಕೆ ಮಾಡಿದ

ಎಲ್ಲರನ್ನು ಅಭಿನಂದಿಸುತ್ತಾ ನನ್ನ ಹುದ್ದೆಗೆ ತಕ್ಕಂತೆ ಪ್ರಾಮಾಣಿಕವಾದ ಕೆಲಸ ಮಾಡಲು ಸಿದ್ಧವಿರುವುದಾಗಿ ಹೇಳಿದರು.

ಸಭೆ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಖಜಾಂಚಿ ಶ್ರೀ ಸಹಜಾನಂದ ಧಂಧರಗಿ ಮಾತನಾಡಿ ರಾಜ್ಯದಲ್ಲೆ ವಿಜಾಪುರ ಜಿಲ್ಲೆ ಸ್ಕೌಟ್ಸ್ ಮತ್ತು ಗೈಡ್ಸ್ ಸಂಘಟನೆ ಮತ್ತು ಮಕ್ಕಳ ಪ್ರಗತಿ ಮುಂಚೂಣಿಯಲ್ಲಿರಬೇಕು ಮತ್ತು ಜಿಲ್ಲಾ ಸಂಘಟನಾ ಆಯುಕ್ತರುಗಳು ಶಾಲೆಗಳಿಗೆ ಬೇಟಿ ನೀಡಿ ಎಲ್ಲ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ಕಡ್ಡಾಯವಾಗಿ ಇರುವಂತೆ ನೋಡಿಕೊಳ್ಳಬೇಕೆಂದು ಹೇಳಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಜರಿದ್ದರು.

**********

ದಿನಾಂಕ 29-06-2014 ರಂದು ಸ್ವಾಮಿ ವಿವೇಕಾನಂದ ಸ್ಕೌಟ್ಸ್, ದಳ, ಸೇಂಟ್ ಜೋಸೆಫ್ ಶಾಲೆ ವಿಜಾಪುರ ಹಾಗೂ ಕಸ್ತೂರಬಾ ಗಾಂಧಿ ಮುಕ್ತ ಗೈಡ್ ಕಂಪನಿಯ 25 ಸ್ಕೌಟ್ಸ್ ಮತ್ತು 20 ಗೈಡ್ಸ್‌ಗಳು ಹೊರ ಸಂಚಾರ ಹಮ್ಮಿಕೊಂಡಿದ್ದರು. ವಿದ್ಯುತ್ ಮಿತವ್ಯಯವಾಗಿ ಬಳಕೆ ವಿಧಾನವನ್ನು ಮತ್ತು ನೀರಿನ ಮಿತವ್ಯಯ ಬಳಕೆ ಮಾಡುವುದನ್ನು, ತಮ್ಮ ಮನೆಯ ಮುಂದೆ ಸ್ವಚ್ಚತಾ ಕಾರ್ಯ ಯಾವ ತೆರನಾಗಿ ಮಾಡಬೇಕು ಎಂಬುದರ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯ ಮಾಡಿದರು. ಮಾರ್ಗದ ಮಧ್ಯದಲ್ಲಿ ಧ್ವಜಗೀತೆ, ಪ್ರಾರ್ಥನಾ ಗೀತೆ, ಜಾನಪದ ಗೀತೆ, ಪ್ರಥಮ ಚಿಕಿತ್ಸೆ ಮುಂತಾದವುಗಳನ್ನು ಕಲಿಸಲಾಯಿತು. ಇವರಿಗೆ ಮಾರ್ಗದರ್ಶಕರಾಗಿ ಲೇಡಿ ಸ್ಕೌಟ್ಸ್ ಮಾಸ್ಟರ್ ಶ್ರೀಮತಿ ಜಿ.ಆರ್. ಬಿಸನಾಳ, ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ರೇವತಿ ಬೂದಿಹಾಳ ಉಪಸ್ಥಿತರಿದ್ದರು.

## ರಾಯಚೂರು

ದಿನಾಂಕ 29-04-2014 ರಂದು ಬಾಪುಮಿಯ ಸಾಹುಕಾರ ಸರಕಾರಿ ಪ್ರಥಮ ದರ್ಜೆ ಕಾಲೇಜು, ಮಾನವಿಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವತಿಯಿಂದ ಲಾಲ್ ಬಹದ್ದೂರುಶಾಸ್ತ್ರಿ ರೋವರ್ ಘಟಕ ಉದ್ಘಾಟನಾ ಸಮಾರಂಭ ಜರುಗಿತು. ಬೇಡನ್ ಪೋವೆಲ್‌ರ ಭಾವಚಿತ್ರಕ್ಕೆ ಮಾಲಾರ್ಪಣೆ ಮಾಡುವುದರ ಮುಖಾಂತರ ಕಾರ್ಯಕ್ರಮವನ್ನು ಉದ್ಘಾಟಿಸಲಾಯಿತು. ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ರಾವುತ್ ರಾವ್ ಬರೂರ್, ಸಂಘಟನಾ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ರಾಯಚೂರು ಮಾತನಾಡುತ್ತಾ, ಸಮಾಜ ಸ್ವಾಸ್ಥ್ಯ ಮತ್ತು ಸದೃಢವಾಗಿರಲು ಯುವಶಕ್ತಿ ಜಾಗೃತರಾಗಿರುವುದು ಅವಶ್ಯ. ಇಂದಿನ ಆಧುನಿಕ ಯುಗದಲ್ಲಿ ಸೇವಾ ಮನೋಭಾವ ಮರೀಚಿಕೆಯಾಗಿರುವುದರಿಂದ ಭ್ರಷ್ಟಾಚಾರ ಹೆಚ್ಚಾಗಲು ಕಾರಣವಾಗಿದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಯುವ ಶಕ್ತಿಯಲ್ಲಿ ನಡತೆ, ಕೌಶಲ್ಯ ನೈತಿಕತೆ, ಆರೋಗ್ಯ ಮುಂತಾದ ಸದ್ಗುಣಗಳನ್ನು ಬೆಳೆಸಿ ದೇಶಕ್ಕೆ ಉತ್ತಮ ಪ್ರಜೆಗಳನ್ನು ನೀಡುತ್ತಿದೆ ಎಂದರು.

ರೋವರ್ ಘಟಕದ ನಾಯಕ ಡಾ॥ ಶಿವಯ್ಯ ಹಿರೇಮಠ ಪ್ರಾಸ್ತಾವಿಕ ಮಾತುಗಳನ್ನಾಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರಾಚಾರ್ಯ ಪ್ರೊ. ಯಂಕಣ್ಣ ವಹಿಸಿದ್ದರು. ಇತಿಹಾಸ ಸಹಾಯಕ ಪ್ರಾಧ್ಯಾಪಕರಾದ ಶೀ ಭೀಮಶಂಕ್ರಪ್ಪ ನಿರೂಪಿಸಿ ಸ್ವಾಗತಿಸಿದರು, ಕುಮಾರ ಬಸವರಾಜ ಪ್ರಾರ್ಥನಾ ಗೀತೆ ಹಾಡಿದರೆ, ಕೊನೆಗೆ ಶ್ರೀ ರಂಗನಾಥ ಬಿಲ್ಲಾರ್ ಬಿ. ವಂದಿಸಿದರು. ಸಹಾಯಕ ಪ್ರಾಧ್ಯಾಪಕರಾದ ಶ್ರೀ ಅರುಣ ಕುಮಾರ್, ಶ್ರೀ ಎಂ. ರವಿ, ಶ್ರೀಮತಿ ಸೈಯಿದಾ ರಷಿದಾ ಪರ್ವಿನ, ಶ್ರೀಮತಿ ನಾಜಿಯಾ ಖಾಜಿ, ಶ್ರೀಮತಿ ಶೀತಲ ಉದಗಿರಿ ಹಾಜರಿದ್ದರು.

## ಗದಗ

ದಿನಾಂಕ 07-07-2014 ರಂದು ಶ್ರೀ ಆರ್.ಆರ್.ಕೆ. ಸ.ಹಿ. ಪ್ರಾ, ಶಾಲೆ, ಮುಷ್ಟಿಕೊಪ್ಪ, ತಾಲ್ಲೂಕು, ಮುಂಡರಗಿ ಜಿಲ್ಲಾ ಗದಗದಲ್ಲಿ ಸುಭಾಷ್‌ಚಂದ್ರ ಬೋಸ್ ತಂಡದ ವತಿಯಿಂದ ಗಿಡಗಳನ್ನು ನೆಡುವ ಕಾರ್ಯಕ್ರಮವನ್ನು

ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ ಮಾಸ್ಟರ್ ಶ್ರೀ ರಮೇಶ್ ಎಂ. ಅಂಬಾಳ ಮಾತನಾಡುತ್ತಾ ಸಮಾಜದಲ್ಲಿ ಪರೋಪಕಾರ ಗುಣ ಹಾಗೂ ಕಾರ್ಯ ಮುಖ್ಯ ಎಂದು ತಿಳಿಸಿದರು.

## ಕೊಪ್ಪಳ

ದಿನಾಂಕ 28-06-2014 ರಂದು ಸರಕಾರಿ ಕುವೆಂಪು ಶತಮಾನೋತ್ಸವ ಮಾದರಿ ಪ್ರಾ. ಶಾಲೆ ಕಿನ್ನಾಳ, ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಗೆ ಒಂದು ದಿನದ ಅಡುಗೆ ತರಬೇತಿಯನ್ನು ನಡೆಸಲಾಯಿತು.

**********

ದಿನಾಂಕ 12-07-2014 ರಂದು ನಿವೇದಿತಾ ಪ್ರೌಢಶಾಲೆಯ ಸ್ಕೌಟ್ಸ್ ಗೈಡ್ಸ್ ಮಕ್ಕಳಿಗೆ ಒಂದು ದಿನದ ಯೋಗಾಸನ ಮತ್ತು ಬಿ.ಪಿ. ವ್ಯಾಯಾಮದ ತರಬೇತಿಯನ್ನು ನಡೆಸಲಾಯಿತು. ಯೋಗಾಸನ ಮತ್ತು ವ್ಯಾಯಾಮ ದಿನನಿತ್ಯ ಮಾಡುವುದರ ಉಪಯೋಗವನ್ನು ಶ್ರೀ ಎ.ಎಸ್. ಶಿವಕುಮಾರ ಎ.ಎಸ್.ಓ.ಸಿ., (ಎಸ್.) ವಿವರಿಸಿ ಹೇಳಿದರು ಹಾಗೂ ಈ ಶಿಬಿರದ ಉಸ್ತುವಾರಿ ವಹಿಸಿದ್ದರು.

ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ರವರು ಈ ಮೇಲ್ಕಂಡ ತರಬೇತಿಯನ್ನು ನೀಡಿದರು. ಹಾಗೂ ಶಾಲೆಯ ಮುಖ್ಯೋಪಾಧ್ಯಾಯರು ಅಧ್ಯಕ್ಷತೆಯನ್ನು ವಹಿಸಿದ್ದರು.

## ಹಾಸನ

ದಿನಾಂಕ 26-06-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಅರಸೀಕೆರೆ ವತಿಯಿಂದ ಶ್ರೀ ವಿವೇಕಾನಂದ ಬಿ.ಎಡ್., ಕಾಲೇಜಿನಲ್ಲಿ ತಾಲ್ಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ವ್ಯವಸ್ಥೆಗೊಳಿಸಲಾಗಿತ್ತು. ಸಮಾವೇಶವನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಹೆಚ್.ಡಬ್ಲ್ಯೂ.ಬಿ.(ಎಸ್.) ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆಯ ಸ್ಕೌಟಿಂಗ್, ಗೈಡಿಂಗ್ ಚಟುವಟಿಕೆಗಳ ಕುರಿತಾಗಿ ಮಾತನಾಡಿದರು. ನಂತರ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಲೀಲಾಮಹೇಶ್ವರ ಹೆಚ್.ಡಬ್ಲ್ಯೂ.ಬಿ.(ಎಸ್.), 2013-14 ರ ಸ್ಥಳೀಯ ಸಂಸ್ಥೆಯ ಕಾರ್ಯಕ್ರಮಗಳ ವರದಿ ನೀಡಿದರು. ಎ.ಡಿ.ಸಿ., ಯವರಾದ ಶ್ರೀ ಜಿ.ಕೆ. ಗಂಗಾಧರ್ ಹೆಚ್.ಡಬ್ಲ್ಯೂ.ಬಿ.(ಎಸ್.) ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿಕೊಂಡಿದ್ದರು. 52 ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದು 1 ದಿನದ ಈ ಸಮಾವೇಶದಲ್ಲಿ ಶ್ರೀಮತಿ ಕಾಮೇಶ್ವರಿ ಭಟ್ ಎ.ಎಲ್.ಟಿ.(ಜಿ) ಮತ್ತು ಶ್ರೀ ಪುಟ್ಟಸ್ವಾಮಿ ಹೆಚ್.ಡಬ್ಲ್ಯೂ.ಬಿ.(ಎಸ್.) ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿ, ದಳ ಸಭೆ ನಡೆಸುವ ವಿಧಾನ, 'ಪ್ರವೇಶ'ದಿಂದ 'ರಾಷ್ಟ್ರಪತಿ ಪುರಸ್ಕಾರ'ದ ನಡುವಿನ ಹಂತಗಳು ಕುರಿತಾಗಿ ಚರ್ಚಿಸಿದರು. ಜಂಟಿ ಕಾರ್ಯದರ್ಶಿ ಶ್ರೀಮತಿ ಕಾತ್ಯಾಯಿನಿಯವರು ಸಮಾವೇಶದ ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ ನಡೆಸಿಕೊಟ್ಟರು.

**************

ದಿನಾಂಕ 28-06-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಹಾಸನ, ಇಲ್ಲಿ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮಾವೇಶಕ್ಕೆ ಹಾಸನ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಒಟ್ಟು 61 ಜನ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಹಾಜರಾಗಿದ್ದರು. ಸಮಾವೇಶದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವೈ.ಎಸ್. ವೀರಭದ್ರಪ್ಪನವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ, ಹೋಂಗಾರ್ಡ್ಸ್ ಕಮಾಂಡೆಂಟ್ ಹಾಗೂ ಹಿಂದಿನ ಜಿಲ್ಲಾ ಸ್ಕೌಟ್ ಆಯುಕ್ತರಾಗಿದ್ದ ಶ್ರೀ ಶಿವಣ್ಣನವರು ಆಗಮಿಸಿ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಹಿತನುಡಿದರು. ಕೇಂದ್ರ ಸ್ಥಾನಿಕ ಆಯುಕ್ತರಾದ

ಶ್ರೀ ಹೆಚ್.ಎಂ. ಗೌಡಯ್ಯನವರು, ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ, ಗೈಡ್ ಆಯುಕ್ತರಾದ ಶ್ರೀಮತಿ ಜಯಾ ರಮೇಶ್ ರವರು ಉಪಸ್ಥಿತರಿದ್ದರು. ಈ ಸಮಾವೇಶದಲ್ಲಿ ಸ್ಕೌಟಿಂಗ್-ಗೈಡಿಂಗ್‌ನಲ್ಲಿ ಸುಧೀರ್ಘ ಸೇವೆ ಸಲ್ಲಿಸಿದ ಶ್ರೀಮತಿ ಸರೋಜಮ್ಮ (ಗೈಡರ್), ನಿವೃತ್ತ ಶಿಕ್ಷಕರು, ಸಂತ ಜೋಸಫರ ಹಿ. ಪ್ರಾ. ಶಾಲೆ, ಸಕಲೇಶಪುರ, ಹಾಗೂ ಶ್ರೀ ಓಂಕಾರ ಮೂರ್ತಿ, ಸ್ಕೌಟ್ ಮಾಸ್ಟರ್, ಅರಸೀಕೆರೆ ತಾಲೂಕು, ಇವರನ್ನು ಸನ್ಮಾನಿಸಲಾಯಿತು. ಎ.ಎಲ್.ಟಿ., ತರಬೇತಿ ಮುಗಿಸಿರುವ ಶ್ರೀ ಎಂ.ಎಸ್. ಪ್ರಕಾಶ್, ಶ್ರೀಮತಿ ಕಾಮೇಶ್ವರಿ, ಶ್ರೀಮತಿ ಪದ್ಮ ಇವರನ್ನು ಅಭಿನಂದಿಸಲಾಯಿತು.

**************

ದಿನಾಂಕ 01-07-2014 ರಿಂದ 07-07-2014 ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ ಮಾಸ್ಟರ್ಸ್ - ಗೈಡ್ ಕ್ಯಾಪ್ಟನ್ಸ್ ಮೂಲತರಬೇತಿ ಶಿಬಿರವನ್ನು ಹಾಸನದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ಏರ್ಪಡಿಸಲಾಗಿತ್ತು. ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ 13 ಸ್ಕೌಟ್ ಮಾಸ್ಟರ್‌ಗಳು, 12 ಗೈಡ್ಸ್ ಕ್ಯಾಪ್ಟನ್‌ಗಳು ತರಬೇತಿಗೆ ಆಗಮಿಸಿದ್ದರು. ಈ ಶಿಬಿರದಲ್ಲಿ ಸ್ಕೌಟ್ ವಿಭಾಗಕ್ಕೆ ನಾಯಕರಾಗಿ ಶ್ರೀ ಎಂ.ಎಸ್. ಪ್ರಕಾಶ್ ಅವರು ಗೈಡ್ ವಿಭಾಗಕ್ಕೆ ಶ್ರೀಮತಿ ಕಾಮೇಶ್ವರಿ ಇವರು ನಾಯಕರಾಗಿ ಕರ್ತವ್ಯ ನಿರ್ವಹಿಸಿದರು. ದಿನಾಂಕ 07 ರಂದು ಮಧ್ಯಾಹ್ನ ಮುಕ್ತಾಯ ಸಮಾರಂಭ ಜರುಗಿತು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಹಾಸನ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ರವಿಕುಮಾರ್ ಅವರು ಪಾಲ್ಗೊಂಡು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ವೈ.ಎಸ್. ವೀರಭದ್ರಪ್ಪನವರು ವಹಿಸಿದ್ದರು. ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಹೆಚ್.ಎಂ. ಗೌಡಯ್ಯನವರು, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಜಯಾ ರಮೇಶ್ ಅವರು ಉಪಸ್ಥಿತರಿದ್ದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಂಚನಮಾಲಾ ಅವರು ಸರ್ವರನ್ನು ಸ್ವಾಗತಿಸಿದರು. ಶ್ರೀ ಮುತ್ತೇಗೌಡರು, ಜಿಲ್ಲಾ ಕಾರ್ಯದರ್ಶಿ ಇವರು ಎಲ್ಲರನ್ನು ವಂದಿಸಿದರು.

*************

ದಿನಾಂಕ : 20-07-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ನಾರಾಯಣ ಮಲ್ಟಿಸ್ಪೆಷಾಲಿಟಿ ಆಸ್ಪತ್ರೆ, ಶಿವಮೊಗ್ಗ ಮತ್ತು ಆಶೀರ್ವಾದ ಟ್ರಸ್ಟ್ ಹಾಗೂ ರುದ್ರಾಕ್ಷ ಧ್ಯಾನ ಕೇಂದ್ರ ಅರಸೀಕೆರೆ ಇವರುಗಳ ಸಂಯುಕ್ತಾಶ್ರಾಯದಲ್ಲಿ ಭಾನುವಾರ ಸರ್ಕಾರಿ(ಬಾಲಕೀಯರು) ಪ್ರೌಢಶಾಲೆ ಅರಸೀಕೆರೆ ಇಲ್ಲಿ ಉಚಿತ ಹೃದಯ ಆರೋಗ್ಯ ತಪಾಸಣೆ ಮತ್ತು ಮೂಳೆ ಹಾಗೂ ಕೀಲು ಆರೋಗ್ಯ ತಪಾಸಣೆ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಉಚಿತವಾಗಿ ಎಕೋ ಇ.ಸಿ.ಜಿ., ಪರೀಕ್ಷೆಯನ್ನು ಸಹ ವ್ಯವಸ್ಥೆಗೊಳಿಸಲಾಗಿತ್ತು.

ಒಟ್ಟು 572 ಶಿಬಿರಾರ್ಥಿಗಳು ವಿವಿಧ ತಪಾಸಣೆಗಳ ಅನುಕೂಲವನ್ನು ಪಡೆದ ಈ ಶಿಬಿರದಲ್ಲಿ ಶ್ರೀಮತಿ ಕಾಮೇಶ್ವರಿ, ಎ.ಎಲ್.ಟಿ., (ಗೈ) ಹಾಗೂ ಕಾರ್ಯದರ್ಶಿ ಶ್ರೀಮತಿ ಜೆ.ಎಲ್. ಲೀಲಾಮಹೇಶ್ವರ್, ಹೆಚ್.ಡಬ್ಲ್ಯೂ.ಯು.(ಎಸ್.) ರೊಂದಿಗೆ ಸ್ಥಳೀಯ ಸಂಸ್ಥೆಯ 10 ಸದಸ್ಯರು, ವಿವಿಧ ಶಾಲೆಗಳಿಂದ 10 ಸ್ಕೌಟ್ಸ್ ಹಾಗೂ 32 ಗೈಡ್ಸ್ ಸ್ವಯಂ ಸೇವಕರಾಗಿ ಕೆಲಸ ನಿರ್ವಹಿಸಿ ಶಿಬಿರದ ಯಶಸ್ಸಿಗೆ ಕಾರಣಕರ್ತರಾದರು. ಶ್ರೀಮತಿ ಕಾತ್ಯಾಯಿನಿ, ಹೆಚ್.ಡಬ್ಲ್ಯೂ.ಬಿ.(ಜಿ). ಸ್ವಯಂ ಸೇವಾ ಕಾರ್ಯಕ್ರಮವನ್ನು ಸಂಘಟಿಸಿ ನಡೆಸಿಕೊಟ್ಟರು.

## ಯಾದಗಿರಿ

ಪರಿಸರ ನಾಶದಿಂದ ಜಗತ್ತು ವಿನಾಶದತ್ತ ಸಾಗುತ್ತಿದ್ದು, ಮಕ್ಕಳಿಂದ ಮಾತ್ರ ಪರಿಸರ ಸಂರಕ್ಷಣೆ ಸಾಧ್ಯ ಎಂದು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಆಯುಕ್ತೆ ಶ್ರೀಮತಿ ನಾಗರತ್ನ ಮೂರ್ತಿ ಅನಪುರ ಹೇಳಿದರು.

ನಗರದ ಆರ್.ವಿ. ವಿದ್ಯಾ ಸಂಸ್ಥೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಆರ್.ವಿ. ವಿದ್ಯಾ ಸಂಸ್ಥೆ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ವಿಶ್ವ ಪರಿಸರ ದಿನಾಚರಣೆ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎಂ. ಪಟ್ಟೇದಾರ ಮಾತನಾಡಿ, ಗಿಡಮರಗಳ ನಾಶದಿಂದ ಇಂದು ಮಳೆಯಿಲ್ಲದೇ ನೀರಿನ ಸಮಸ್ಯೆ ಎದುರಿಸುತ್ತಿದ್ದೇವೆ. ಹಾಗೆಯೇ ನೀರಿನ ಸದ್ಬಳಕೆ ಮಾಡಿಕೊಳ್ಳದ ಕಾರಣ ಅಂತರ್ಜಲ ಮಟ್ಟ ಕುಸಿದು ಸಂಕಷ್ಟ ಅನುಭವಿಸುತ್ತಿದ್ದೇವೆ. ಪರಿಸರ ನಾಶದಿಂದ ಮನುಕುಲ ನಾಶವಾಗುವ ಕಾಲ ಸನ್ನಿಹಿತವಾಗುತ್ತಿದೆ. ಇದನ್ನು ಅರಿತು ಮರಗಿಡಗಳನ್ನು ಬೆಳೆಸಿ ಪರಿಸರ ಅಸಮತೋಲನ ಆಗದಂತೆ ಎಚ್ಚರಿಕೆ ವಹಿಸಬೇಕೆಂದು ಸಲಹೆ ನೀಡಿದರು.

ಸಂಸ್ಥೆಯ ಪ್ರಾಂಶುಪಾಲ ಶ್ರೀಮತಿ ಸುಜಿತಾ, ಜಿಲ್ಲಾ ತರಬೇತಿದಾರ ಶ್ರೀ ರಾಜೇಂದ್ರ, ಜಿಲ್ಲಾ ಆಯುಕ್ತ ಶ್ರೀ ರಾಘವೇಂದ್ರ ಉಪಸ್ಥಿತರಿದ್ದರು. ವಿದ್ಯಾರ್ಥಿನಿ ಸಂಗೀತಾ ಮತ್ತು ಸೃಷ್ಟಿ ಪ್ರಾರ್ಥಿಸಿದರು. ಸ್ಕೌಟ್ಸ್ ಮಾಸ್ಟರ್ ಶ್ರೀ ಹಣಮಯ್ಯ ನಿರೂಪಿಸಿದರು. ಶಿಕ್ಷಕಿ ಶ್ರೀಮತಿ ಜಯಶ್ರೀ ಸ್ವಾಗತಿಸಿ, ವಂದಿಸಿದರು.

ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಚಿತ್ರಕಲಾ ಮತ್ತು ಪ್ರಬಂಧ ಸ್ಪರ್ಧೆ ಏರ್ಪಡಿಸಲಾಗಿತ್ತು. ವಿಜೇತ ವಿದ್ಯಾರ್ಥಿಗಳಿಗೆ ಜಿಲ್ಲಾ ಸಂಸ್ಥೆಯಿಂದ ಬಹುಮಾನ ವಿತರಿಸಲಾಯಿತು.

************

ದಿನಾಂಕ 09-07-2014 ರಂದು ಯಾದಗಿರಿ ಜಿಲ್ಲೆಗೆ ಜಿಲ್ಲಾಧಿಕಾರಿಗಳಾಗಿ ಆಗಮಿಸಿದ ಶ್ರೀ ಮನೋಜ್ ಜೈನ್ ರವರನ್ನು ಯಾದಗಿರಿ ಜಿಲ್ಲಾ ಸಂಸ್ಥೆಯಿಂದ ಸನ್ಮಾನಿಸಲಾಯಿತು. ಸನ್ಮಾನ ಸ್ವೀಕರಿಸಿ ಮಾತನಾಡಿದ ಜಿಲ್ಲಾಧಿಕಾರಿಗಳು ಜಿಲ್ಲಾ ಸಂಸ್ಥೆಗೆ ಎಲ್ಲಾ ರೀತಿಯ ಸಹಕಾರ ನೀಡುವುದಾಗಿ ಹಾಗೂ ಜಿಲ್ಲಾ ಸಂಸ್ಥೆಗೆ ನಿವೇಶನ ನೀಡುವುದಾಗಿ ಭರವಸೆ ನೀಡಿದರು.

ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎಂ. ಪಟ್ಟೇದಾರ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ನಾಗರತ್ನ ಅನಪುರ, ಜಿಲ್ಲಾ ತರಬೇತಿದಾರ ಶ್ರೀ ರಾಜೇಂದ್ರ, ಡಿ.ಓ.ಸಿ., ರಾಘವೇಂದ್ರ, ಸ್ಕೌಟ್ಸ್ ಮಾಸ್ಟರ್‌ಗಳಾದ ಶ್ರೀ ಹಣಮಯ್ಯ, ಶ್ರೀ ಜಹೀರ್, ಶ್ರೀ ನಿಂಗಯ್ಯ ಹಾಜರಿದ್ದರು.

## ಬಾಗಲಕೋಟೆ

ದಿನಾಂಕ 14-07-2014 ರಂದು ಬದಾಮಿ ತಾಲ್ಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಹಾಗೂ ಮಾಹಿತಿ ಶಿಬಿರವನ್ನು ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆಯ ಪ್ರೌಢಶಾಲೆಯಲ್ಲಿ ಜರುಗಿಸಲಾಯಿತು. ತಾಲ್ಲೂಕಿನ ಪ್ರಾಥಮಿಕ ಮತ್ತು ಪ್ರೌಢಶಾಲೆಯ ಶಿಕ್ಷಕ/ಶಿಕ್ಷಕಿಯರುಗಳಿಗೆ ಸ್ಕೌಟ್ಸ್-ಗೈಡ್ಸ್ ಚಳವಳಿಯ ಕುರಿತು ಮಾಹಿತಿಯನ್ನು ನೀಡಲಾಯಿತು. ತರಬೇತಿ ಪಡೆದ 53 ಸ್ಕೌಟರ್ಸ್ ಗೈಡರ್ಸ್ ಹಾಜರಿದ್ದರು. ಮಾಹಿತಿಯ ಕಾರ್ಯಾಗಾರದಲ್ಲಿ 90 ಶಿಕ್ಷಕ-ಶಿಕ್ಷಕಿ ಯರುಗಳು ಪಾಲುಗೊಂಡಿದ್ದರು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಎ.ಎಂ. ವಡಗೇರಿ. ಬಿ.ಇ.ಓ., ಬಾದಾಮಿ ವಹಿಸಿದ್ದರು. ಉದ್ಘಾಟಕರಾಗಿ ಶ್ರೀ ಶರದ್‌ಗೌಡ ಪಾಟೀಲ ಆಡಳಿತಾಧಿಕಾರಿ, ಕಾಳಿದಾಸ ಶಿಕ್ಷಣ ಸಂಸ್ಥೆ, ಮುಖ್ಯ ಅತಿಥಿಗಳಾಗಿ ಶ್ರೀ ವಿ.ಎಸ್. ಮೇಟಿ, ಪಿ.ಇ.ಓ., ಶ್ರೀಮತಿ ಸಿದ್ದಮ್ಮ ಪಾಟೀಲ ಸಮನ್ವಯ ಅಧಿಕಾರಿಗಳು

ಶ್ರೀ ಆರ್.ಆರ್. ನಾಯ್ಕರ, ಬಿ.ಆರ್.ಪಿ. ಬದಾಮಿ, ಶ್ರೀ ಎಸ್.ಎಸ್. ನಾರಾ, ಶ್ರೀ ಎಸ್.ಆರ್. ಪಾಟೀಲ, ಸ್ಕೌಟ್ ಶಿಕ್ಷಕರು, ಶ್ರೀಮತಿ ಸುಷ್ಮಾ ಗುಡ್ಡದ ಶ್ರೀ ಚಂದ್ರಶೇಖರ ಸಾವಳಗಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಹೆಚ್. ಹತ್ತಿಮತ್ತೂರು ಜಿಲ್ಲಾ ಸಂಘಟಕ ಹಾಜರಿದ್ದರು.

ಉದ್ಘಾಟನೆಯೊಂದಿಗೆ ಮಾತನಾಡಿದ ಬಿ.ಇ.ಓ., ಶ್ರೀ ಎ.ಎಂ. ವಡಗೇರಿಯವರು ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ತಂಡ ಕಡ್ಡಾಯವಾಗಿ ರಚಿಸಬೇಕು. ಕಾರ್ಯಾಗಾರದಲ್ಲಿ ಹಾಜರಾದ ಶಿಕ್ಷಕರು ಎಲ್ಲರು ತರಬೇತಿ ಪಡೆದು ಶಾಲೆಯಲ್ಲಿ ಚಟುವಟಿಕೆಗಳು ಜರುಗಿಸಬೇಕು ಎಂದರು. ಪ್ರಾಸ್ತಾವಿಕವಾಗಿ ಚಳವಳಿಯ ಕುರಿತು, ಶ್ರೀ ಸಿ.ಎ. ಸಾವಳಗಿ ಮಾತನಾಡಿದರು. ಶ್ರೀ ಎಸ್.ಎಸ್. ನಾರಾ, ಶ್ರೀ ಎಸ್.ಆರ್. ಪಾಟೀಲ, ಶ್ರೀಮತಿ ಸುಷ್ಮಾ ಗುಡ್ಡದ ರವರು ಚಳವಳಿ ಶಿಬಿರಗಳು ಕುರಿತು ಎಲ್ಲರಿಗೆ ಮಾಹಿತಿಗಳನ್ನು ನೀಡಿದರು.

ಶ್ರೀ ಪಿ.ಟಿ. ನೀಲಗುಂದ ಸ್ಕೌಟ್ ಶಿಕ್ಷಕರು ಕಾರ್ಯಕ್ರಮ ನಡೆಸಿಕೊಟ್ಟರು ಶ್ರೀ ವಿ.ಎಸ್. ಶೆಟ್ಟರ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಎಲ್ಲರನ್ನು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಆರ್.ಎಂ. ಕತ್ತಿಕೈ ಶಿಕ್ಷಕರು ವಂದನಾರ್ಪಣೆ ಸಲ್ಲಿಸಿದರು.

## ಚಿಕ್ಕಮಗಳೂರು

2013-14 ನೇ ಸಾಲಿನ ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಜಿಲ್ಲಾ ಸಂಸ್ಥೆಯ ವತಿಯಿಂದ ಸನ್ಮಾನಿಸಲಾಯಿತು. ಅಧ್ಯಕ್ಷತೆ ವಹಿಸಿ ಮಾತನಾಡಿದ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿ ಜೀವನದಲ್ಲಿ ಪ್ರತಿಯೊಂದನ್ನು ಕಲಿಯುವ ಅವಶ್ಯಕತೆಯಿದ್ದು, ಪ್ರಥಮವಾಗಿ ನಮ್ಮನ್ನು ನಾವು ಅರ್ಥಮಾಡಿಕೊಳ್ಳಬೇಕೆಂದರು.

ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರ ವಿತರಿಸಿ ಮಾತನಾಡಿದ ಪಂಚಾಯಿತಿ ಮಾಜಿ ಅಧ್ಯಕ್ಷ ಹಾಗೂ ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ವಿ.ಎನ್. ಮಹೇಶ್ ಮಾತನಾಡಿ ರಾಜ್ಯ ಪುರಸ್ಕಾರ ಹೊಂದಿ ಹೆಗಲಿಗೆ ಗರಿಯನ್ನು ಸಿಕ್ಕಿಸಿಕೊಂಡವರ ಜವಾಬ್ದಾರಿ ಇನ್ನೂ ಹೆಚ್ಚಾಗಿದೆ. ಮುಂದೆ ರಾಷ್ಟ್ರಪತಿ ಪದಕ ಪಡೆಯುವ ನಿರ್ಧಾರ ಮಾಡಬೇಕೆಂದು ಹೇಳಿದರು.

ಕಾರ್ಯಕ್ರಮದಲ್ಲಿ ಜಿಲ್ಲಾ ತರಬೇತಿ ಆಯಕ್ತೆ ಶ್ರೀಮತಿ ಸಂಧ್ಯಾರಾಣಿ ಹಿರಿಯ ಸ್ಕೌಟರ್ ಶ್ರೀ ನೀಲಕಂಠಾಚಾರ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ನಂದಕುಮಾರ್, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಬಿ.ಎನ್. ಕಿರಣ್ ಕುಮಾರ್ ಉಪಸ್ಥಿತರಿದ್ದು ಶ್ರೀ ನಂದಕುಮಾರ್ ಸ್ವಾಗತಿಸಿ ವಂದಿಸಿದರು.

## ದಕ್ಷಿಣ ಕನ್ನಡ

ದಿನಾಂಕ 12-07-2014 ರಂದು ಕರಾವಳಿಯಲ್ಲಿ ಮುಂಗಾರು ಮಳೆ ಈಗಾಗಲೇ ಪ್ರಾರಂಭವಾದ ಹಿನ್ನೆಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಕ್ಕಳಿಂದ ಭತ್ತದ ಕೃಷಿ ಮಾಡುವ ಬಗ್ಗೆ ಕಾರ್ಯಕ್ರಮವನ್ನು ಡಾ. ಶಿವರಾಮ ಕಾರಂತ ಪಿಲಿಕುಳ ನಿಸರ್ಗಧಾಮದ ಸಂಸ್ಕೃತಿ ಗ್ರಾಮದ ಗುತ್ತಿನ ಮನೆಯ ಮುಂಭಾಗದ ಬಾಕಿಮಾರು ಗದ್ದೆಯಲ್ಲಿ ಆಯೋಜಿಸಲಾಯಿತು.

ದಕ್ಷಿಣ ಕನ್ನಡ ಜಿಲ್ಲೆಯ ರಾಮಕೃಷ್ಣ ಪ್ರೌಢಶಾಲೆ ಹರೇಕಳ, ವಿದ್ಯಾರತ್ನ ಪ್ರೌಢಶಾಲೆ ದೇರಳಕಟ್ಟೆ, ನಿತ್ಯಾಧರ ಪ್ರೌಢಶಾಲೆ ಬಬ್ಬುಕಟ್ಟೆಯ ಸುಮಾರು 90 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಪಿಲಿಕುಳ ನಿಸರ್ಗಧಾಮದ ಕಾರ್ಯನಿರ್ವಾಹಕ ನಿರ್ದೇಶಕ ಶ್ರೀ ಎಸ್.ಎ. ಪ್ರಭಾಕರ ಶರ್ಮ ಅವರು ಮಕ್ಕಳಿಗೆ ಭತ್ತದ ನೇಜಿಯನ್ನು ನೀಡಿ ನೆಡುವ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ಅವರು ಮಕ್ಕಳಿಗೆ ನೇಜಿಯನ್ನು ನೆಡುವ ವಿಧಾನವನ್ನು ವಿವರಿಸಿ ಮಾರ್ಗದರ್ಶನ ನೀಡಿದರು. ಬಳಿಕ ಪಿಲಿಕುಳ ನಿಸರ್ಗಧಾಮದ ತೋಟಗಾರಿಕಾ ವಿಭಾಗದಲ್ಲಿ ಮಾವು ಮತ್ತು ಚಿಕ್ಕು ಗಿಡಗಳನ್ನು ಸ್ಟೋನ್ ಗ್ರಾಫ್ಟ್ ಮತ್ತು ಪ್ಯಾಚ್ ಬಡ್ಸ್ ವಿಧಾನದಲ್ಲಿ ಕಸಿ ಕಟ್ಟುವ ಪ್ರಾತ್ಯಕ್ಷಿಕೆಯನ್ನು ತೋಟಗಾರಿಕಾ ಮೇಲ್ವಿಚಾರಕರಾದ ಜಯರಾಮ್ ಮಾಡಿದರು.

ನಿರ್ದೇಶಕರಾದ ಡಾ. ಕೆ.ವಿ.ರಾವ್, ಪ್ರಾಂಶುಪಾಲರಾದ ಡಾ. ಎಚ್.ಎಸ್. ಶೆಣೈ, ಸಂಪರ್ಕ ಅಧಿಕಾರಿ ಭಾಸ್ಕರ್ ಮುಂತಾದವರು ಉಪಸ್ಥಿತರಿದ್ದರು. ಹರೇಕಳ, ಸ್ಕೌಟ್ಸ್ ಮಾಸ್ಟರ್, ಶ್ರೀ ತ್ಯಾಗಂ ವಿದ್ಯಾರ್ಥಿಗಳ ಉಸ್ತುವಾರಿ ವಹಿಸಿದ್ದರು.

*************

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದ.ಕ. ಜಿಲ್ಲಾ ಸಂಸ್ಥೆ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಜಂಟಿ ಆಶ್ರಯದಲ್ಲಿ ದಿನಾಂಕ 21-06-2014 ರಂದು ವಿಶ್ವಪರಿಸರ ದಿನಾಚರಣೆ ಅಂಗವಾಗಿ ಜಾಥಾ ಹಮ್ಮಿಕೊಳ್ಳಲಾಗಿತ್ತು. ಈ ಜಾಥಾದಲ್ಲಿ ದ.ಕ. ಜಿಲ್ಲಾ ಸಂಸ್ಥೆಯಿಂದ ಒಟ್ಟು 300 ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್ಸ್ ಮತ್ತು ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಎಂ. ಪ್ರಭಾಕರ್ ಭಟ್, ಸ್ಕೌಟರ್ ಜಾರ್ಜ್ ಡಿ'ಸೋಜ ಭಾಗವಹಿಸಿದರು.

*************

ದಿನಾಂಕ 21-06-2014 ರಂದು ವಿದ್ಯಾರ್ಥಿಗಳಿಗೆ ನಾಡಿನ ಜನತೆಗೆ, ನೀರಿನ ಬಳಕೆ, ಸಂರಕ್ಷಣೆ, ಮಳೆ ಕೊಯ್ಲಿನ ಅಗತ್ಯತೆ ಕುರಿತು ಜಾಗೃತಿಯನ್ನು ಮೂಡಿಸಲು ಪುತ್ತೂರಿನ ವಿವೇಕಾನಂದ ಆಂಗ್ಲಮಾಧ್ಯಮ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ನಗರದ ಬೊಳುವಾರ ವೃತ್ತದಿಂದ ದರ್ಬೆ ವೃತ್ತದವರೆಗೆ ಜಲಜಾಗೃತಿ ಜಾಥಾವನ್ನು ಹಮ್ಮಿಕೊಳ್ಳಲಾಯಿತು. ಸುದ್ದಿಬಿಡುಗಡೆ ದಿನಪತ್ರಿಕೆಯ ಪ್ರಧಾನ ಸಂಪಾದಕ ಶ್ರೀ ಕರುಣಾಕರ ರೈ ಸಿ.ಎಚ್. ಕಲ್ಪವೃಕ್ಷ ನೀರೆರೆಯುವುದರ ಮೂಲಕ ಜಾಥಾವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪುತ್ತೂರು ತಾಲ್ಲೂಕು ದೈಹಿಕ ಶಿಕ್ಷಣ ನಿರ್ದೇಶಕ ಶ್ರೀ ಸುಂದರಗೌಡ, ವಿವೇಕಾನಂದ ವಿದ್ಯಾಸಂಸ್ಥೆಗಳ ಸಂಚಾಲಕರಾದ ಶ್ರೀ ರವೀಂದ್ರ ಪಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ವಿದ್ಯಾ ಆರ್. ಗೌರಿ, ಹಿರಿಯ ಶಿಕ್ಷಕಿ ಶ್ರೀಮತಿ ಮೋಹಿನಿ ಹಾಗೂ ಸಂಸ್ಥೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಜಾಥಾದಲ್ಲಿ ಭಾಗವಹಿಸಿದ್ದರು. ಜಾಥಾದಲ್ಲಿ ಜಲಸಂರಕ್ಷಣೆಗೆ ಸಂಬಂಧಪಟ್ಟ ಕರಪತ್ರಗಳನ್ನು ನೀರಿನ ಮಿತಬಳಕೆಯ ಸ್ಟಿಕ್ಕರ್‌ಗಳನ್ನು ಹಂಚಲಾಯಿತು.

*************

ಭಾರತ್ ಸೌಟ್ಸ್ ಮತ್ತು ಗೈಡ್ಸ್ ದಕ ಜಿಲ್ಲಾ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್, ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರ ದಿನಾಂಕ 23-06-2014 ರಿಂದ 29-06-2-14 ರ ವರೆಗೆ ದ.ಕ. ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಸ್ಕೌಟ್ಸ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರದಲ್ಲಿ 30 ಶಿಕ್ಷಕ-ಶಿಕ್ಷಕಿಯರು, ಗೈಡ್ ಶಿಕ್ಷಕರ ಪ್ರಾಥಮಿಕ ತರಬೇತಿ ಶಿಬಿರದಲ್ಲಿ 32 ಶಿಕ್ಷಕಿಯರು ಭಾಗವಹಿಸಿದ್ದರು. ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಎನ್.ಎಸ್. ಕರಣಿಕ್ ಹೆಡ್ ಕ್ವಾರ್ಟಸ್ ಕಮೀಷನರ್ (ಸ್ಕೌಟ್ಸ್) ರವರು ಅಧ್ಯಕ್ಷತೆ ವಹಿಸಿದ್ದರು. ಕು. ಜೂಲಿಯಾನ ಲಸ್ರಾದೋ ಎಲ್.ಟಿ.(ಕಬ್) ಶಿಬಿರವನ್ನು ಉದ್ಘಾಟಿಸಿದರು. ಶಿಬಿರದ ಸಮಾರೋಪ ಸಮಾರಂಭ ಶ್ರೀ ಎನ್.ಜಿ.ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು (ಸ್ಕೌಟ್ಸ್) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ದಯಾನಾಥ ಕೋಟ್ಯಾನ್ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾ ಕಾರ್ಯದರ್ಶಿ ಶ್ರೀ ಸಂತೋಷ್ ಕುಮಾರ್ ಕದ್ರಿ, ಖಜಾಂಚಿ, ವಾಸುದೇವ ಬೋಳೂರು ಅತಿಥಿಗಳಾಗಿ ಭಾಗವಹಿಸಿದ್ದರು. ಸ್ಕೌಟ್ ಶಿಬಿರದ ನಾಯಕಿಯಾಗಿ ಶ್ರೀಮತಿ ಪ್ರಫುಲ್ಲಾ ಕಾರ್ಯನಿರ್ವಹಿಸಿದರು.

***********

ದಿನಾಂಕ 30-06-2014 ರಿಂದ 06-07-2014 ರ ವರೆಗೆ ನಡೆದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದ.ಕ. ಜಿಲ್ಲಾ ಸಂಸ್ಥೆಯ ವತಿಯಿಂದ ಕಬ್ಸ್-ಬುಲ್ ಬುಲ್ಸ್, ಶಿಕ್ಷಕ-ಶಿಕ್ಷಕಿಯರ ಪ್ರಾಥಮಿಕ ತರಬೇತಿ ಶಿಬಿರ, ದ.ಕ. ಜಿಲ್ಲಾ ತರಬೇತಿ ಕೇಂದ್ರ, ಪಿಳಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಕಬ್ಸ್ ಶಿಕ್ಷಕರ ತರಬೇತಿಗೆ ಶ್ರೀ ಮೋಹನ್ ಕುಮಾರ್ ಎ.ಎಲ್.ಟಿ. (ಕಬ್ಸ್) ಬುಲ್ ಬುಲ್ ತರಬೇತಿಗೆ ಸಿಸ್ಟರ್ ಲೊರಿನ್ (ಬಲ್‌ಬುಲ್) ನಾಯಕರಾಗಿ ಕಾರ್ಯನಿರ್ವಹಿಸಿದ್ದರು.

************

ದಿನಾಂಕ : 02-07-2014 ರಿಂದ 06-07-2014 ರ ವರೆಗೆ ಬನ್ನಿ ಲೀಡರ್ಸ್ ತರಬೇತಿ ಶಿಬಿರ ಸಂಘಟಿಸಲಾಯಿತು. ತರಬೇತಿ ಶಿಬಿರದ ನಾಯಕರಾಗಿ ಶ್ರೀಮತಿ ಎಸ್.ಕೆ ಛಾಯಾ ಎಲ್.ಟಿ (ಗೈಡ್) ಕಾರ್ಯನಿರ್ವಹಿಸಿದ್ದರು. ಶಿಬಿರದಲ್ಲಿ ವಿವಿಧ ಶಾಲೆಗಳಿಂದ 10 ಶಿಕ್ಷಕಿಯರು ಭಾಗವಹಿಸಿದ್ದರು.

## ತುಮಕೂರು

ದಿನಾಂಕ 15/07/2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ತುಮಕೂರು ಮತ್ತು ಅರಣ್ಯ ಇಲಾಖೆ, ತುಮಕೂರು ವತಿಯಿಂದ ನಡೆದ ಪರಿಸರ ಅಧ್ಯಯನ ಹಾಗೂ ಸಂರಕ್ಷಣೆ ಕುರಿತು ಒಂದು ದಿನದ ಕಾರ್ಯಾಗಾರ ಮತ್ತು ಸಸಿ ನೆಡುವ ಕಾರ್ಯಕ್ರಮವನ್ನು ನಾಮದ ಚಿಲುಮೆ ಅರಣ್ಯ ಪ್ರದೇಶದಲ್ಲಿ ಹಮ್ಮಿಕೊಂಡಿದ್ದು, ಈ ಕಾರ್ಯಾಗಾರದಲ್ಲಿ ಅರಣ್ಯ ಇಲಾಖೆಯ ರೇಂಜ್ ಆಫೀಸರ್ ಆದ ಶ್ರೀ ನರಸಿಂಹಮೂರ್ತಿಯವರು ಹಾಗೂ ಪ್ರಕಾಶ್ ರವರು ಎಲ್ಲಾ ರೀತಿಯ ಸಂಪೂರ್ಣ ಸಹಕಾರವನ್ನು ನೀಡಿದರು. ಪ್ರಕೃತಿ ಅಧ್ಯಯನ ಮತ್ತು ಸಂರಕ್ಷಣೆ ಕುರಿತಂತೆ

ಸ್ಕೌಟ್-ಗೈಡ್‌ಗಳಿಗೆ ವಿಷಯವನ್ನು ತಿಳಿಸಿದರು. ಅರಣ್ಯದ ಬಗ್ಗೆ ಮತ್ತು ಪರಿಸರದ ಬಗ್ಗೆ ಸ್ಕೌಟ್-ಗೈಡ್‌ಗಳಿಗೆ ಮನವರಿಕೆ ಮಾಡಿಕೊಟ್ಟರು. 12 ಸ್ಕೌಟರ್-ಗೈಡರ್ ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳ ಸಹಕಾರದೊಂದಿಗೆ ಕಾರ್ಯಗಾರ ಯಶಸ್ವಿಯಾಗಿ ನಡೆಯಿತು. ಜಿಲ್ಲಾ ಸಂಘಟಕ ಶ್ರೀ ಕರಿಸಿದ್ದಪ್ಪ ಕಾರ್ಯಾಗಾರದಲ್ಲಿ ಭಾಗವಹಿಸಿದ್ದರು.

## ಮೈಸೂರು

ದಿನಾಂಕ 10/07/2014 ರಂದು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವನ್ನು ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಸ್ಕೌಟ್-ಗೈಡ್ ಭವನದಲ್ಲಿ ನೆರವೇರಿಸಲಾಯಿತು.

ಈ ಶಿಬಿರದಲ್ಲಿ ಬಿ.ಇ.ಓ., ಬಿ.ಆರ್.ಸಿ., ಬಿ.ಆರ್.ಪಿ., ಸಿ.ಆರ್.ಪಿ., ಟಿ.ಪಿ.ಓ. ವಿಷಯ ಪರಿವೀಕ್ಷಕರು ಸೇರಿದಂತೆ 175 ಅಧಿಕಾರಿಗಳು ಭಾಗವಹಿಸಿದ್ದು. ಬೆಳಗ್ಗೆ ನಡೆದ ಉದ್ಘಾಟನಾ ಸಮಾರಂಭಕ್ಕೆ ಶ್ರೀ ಹೆಚ್.ಆರ್. ಬಸಪ್ಪ ಉಪನಿರ್ದೇಶಕರು(ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಹಾಗೂ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಮೈಸೂರು, ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಈ ಸಂದರ್ಭದಲ್ಲಿ ಮಾತನಾಡಿದ ಶ್ರೀ ಹೆಚ್.ಆರ್. ಬಸಪ್ಪನವರು ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಕ-ಶಿಕ್ಷಕಿಯರು ಸ್ಕೌಟ್-ಗೈಡ್ ಚಳುವಳಿಯಲ್ಲಿ ಭಾಗವಹಿಸಿ, ಸ್ಕೌಟ್-ಗೈಡ್‌ಗಳು ಜಿಲ್ಲಾ, ರಾಜ್ಯ, ರಾಷ್ಟ್ರ ಹಾಗು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಅನೇಕ ಪದಕ-ಪ್ರಶಸ್ತಿ ಪಡೆಯಲು ಸಹಕರಿಸಬೇಕು ಎಂದರು.

ಶಿಬಿರದಲ್ಲಿ ಭಾಗವಹಿಸಿದ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಶುಭಾಶಯ ತಿಳಿಸಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ನವರು, ತಾವುಗಳು ತಮ್ಮ ಜಿಲ್ಲೆ, ತಾಲ್ಲೂಕು, ಬ್ಲಾಕ್, ಕ್ಲಸ್ಟರ್ ಮಟ್ಟದಲ್ಲಿರುವ ಶಿಕ್ಷಕ-ಶಿಕ್ಷಕಿಯರಿಗೆ ಸ್ಕೌಟಿಂಗ್ ಮತ್ತು ಗೈಡಿಂಗ್ ಮಹತ್ವವನ್ನು ತಿಳಿಸಿ, ಅವರುಗಳು ಜಿಲ್ಲಾ ಸಂಸ್ಥೆಯವರು ಹಮ್ಮಿಕೊಳ್ಳುವ ಶಿಬಿರದಲ್ಲಿ ಭಾಗವಹಿಸಿ ಈ ಚಳುವಳಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ಕೌಟ್-ಗೈಡ್ಸ್‌ಗಳು ಭಾಗವಹಿಸುವಂತೆ ತಿಳಿಸಿದರು.

ಶ್ರೀಮತಿ ಸುಜಯ ಜಿಲ್ಲಾ ಜಂಟಿ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು. ಈ ಸಮಾರಂಭಕ್ಕೆ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀ ಎಲ್.ಟಿ. ಲೋಕೇಶ್ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್), ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ.(ಗೈ), ಶ್ರೀಮತಿ ಬಿ.ಡಿ. ಶಾಂತಾ, ಎಲ್.ಟಿ.(ಗೈ) ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

ಪ್ರಾರಂಭದಲ್ಲಿ ಸ್ವಾಗತ ಕೋರಿದ ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಗಳು. ಸ್ಕೌಟಿಂಗ್-ಗೈಡಿಂಗ್ ಬಗ್ಗೆ ತಿಳಿಸಿ ಜಿಲ್ಲಾ ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಿದರು. ಜಿಲ್ಲೆಯಲ್ಲಿ ಸ್ಕೌಟ್-ಗೈಡ್ ಚಳುವಳಿ ನಡೆಯುವಲ್ಲಿ ಶಿಕ್ಷಣ ಇಲಾಖೆಯ ಪಾತ್ರವನ್ನು ತಿಳಿಸಿದರು. ಡಾ. ಜೆ. ಕಮಲಾರಾಮನ್, ಜಿಲ್ಲಾ ಆಯುಕ್ತರು(ಗೈಡ್) ವಂದನಾರ್ಪಣೆ ಮಾಡಿದರು.

ಸಂಜೆ ನಡೆದ ಮುಕ್ತಾಯ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಬಿ.ಕೆ. ಬಸವರಾಜು, ಡಿ.ಡಿ.ಪಿ.ಐ., ಡಯಟ್ ಸಂಸ್ಥೆ, ಮೈಸೂರು ಆಗಮಿಸಿದ್ದರು. ಶ್ರೀ ಹೆಚ್.ಆರ್. ಬಸಪ್ಪ ಡಿ.ಡಿ.ಪಿ.ಐ., (ಆಡಳಿತ) ರವರು ಉಪಸ್ಥಿತರಿದ್ದರು. ಡಾ. ಜೆ. ಕಮಲಾ ರಾಮನ್ ಡಿ.ಸಿ.(ಗೈ) ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಶ್ರೀ ಬಿ.ಕೆ. ಬಸವರಾಜುರವರು ಮಾತನಾಡಿ, ಇಂದಿನ ಮಕ್ಕಳಲ್ಲಿ ಬೌದ್ಧಿಕ ಮೌಲ್ಯಗಳು ಕಡಿಮೆಯಾಗಿದ್ದು ಆತ್ಮಹತ್ಯೆ, ಮುಂತಾದ ಅಚಾತುರ್ಯಗಳ ಬಗ್ಗೆ ಯೋಚಿಸುತ್ತಾರೆ. ಇವುಗಳನ್ನು ಅವರು ಕಡಿಮೆ ಮಾಡಿಕೊಳ್ಳಲು, ಸ್ಕೌಟಿಂಗ್-ಗೈಡಿಂಗ್ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು ಎಂದರು. ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಆಯುಕ್ತರು (ಸ್ಕೌಟ್) ರವರು ಸ್ವಾಗತ ಕೋರಿದರು.

## ಕಾರವಾರ

ದಿನಾಂಕ 11/07/2014 ರಂದು ಮಾರ್ಥೋಮ ಶಾಲೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಸೇರಿ ವನಮಹೋತ್ಸವದ ಜೊತೆಗೆ 2014-15ನೇ ಸಾಲಿನ ಚಟುವಟಿಕೆಗಳ ಆರಂಭೋತ್ಸವವನ್ನು ಹಮ್ಮಿಕೊಂಡಿದ್ದರು. ಶಾಲೆಯ ಪ್ರಾಂಶುಪಾಲರಾದ ಫಾ. ಥೋಮಸ್ ಕುರಿಯನ್ ರವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಅತಿಥಿಗಳಾಗಿ ಪಿ.ಬಿ.ಎಸ್.ಇ. ಶಾಲೆಯ ಮುಖ್ಯ ಅಧ್ಯಾಪಕಿ-ಆಡಳಿತ ಮಂಡಳಿಯ ಖಜಾಂಚಿಗಳಾದ ಶ್ರೀ ಕೆ.ಸಿ. ವರ್ಗೀಸ್, ಮಾರ್ಥೋಮಾ ಶಾಲೆಯ ಹಿರಿಯ ಶಿಕ್ಷಕಿಯರಾದ ಮಿಸ್ ಇಡಾಲಿನ್ ವಾಜ್, ಜಿಲ್ಲಾ ಕಾರ್ಯದರ್ಶಿಳಾದ ಶ್ರೀ ಬಿ.ಡಿ. ಫರ್ನಾಂಡೀಸ್ ಆಗಮಿಸಿದ್ದರು.

ಸ್ಕೌಟ್ ಪ್ರಾರ್ಥನೆಯೊಂದಿಗೆ ಸಭಾ ಕಾರ್ಯಕ್ರಮ ಆರಂಭಗೊಂಡು ಸ್ಕೌಟ್ ಡೊಮಿನಿಕ್ ಫರ್ನಾಂಡೀಸ್ ಬಂದ ಅತಿಥಿಗಳನ್ನು ಸ್ವಾಗತಿಸಿದರು. ದೀಪ ಬೆಳಗಿಸುವುದರೊಂದಿಗೆ ವನಮಹೋತ್ಸವದ ಜೊತೆಗೆ ಚಟುವಟಿಕೆಗಳ ಆರಂಭೋತ್ಸವ ನಡೆಯಿತು. ಉದ್ಘಾಟನೆ ಮಾಡಿದ ಪ್ರಾಂಶುಪಾಲರಾದ ಫಾ. ಥೋಮಸ್ ಕುರಿಯನ್ ರವರು ಮಾತನಾಡಿ ಸ್ಕೌಟ್-ಗೈಡ್ ಚಳುವಳಿಯಲ್ಲಿ ಮಕ್ಕಳನ್ನು ದೇಶದ ಉತ್ತಮ ಪ್ರಜೆಯಾಗಲೂ ಪ್ರಚೋದನೆ ನೀಡುತ್ತಿದೆ. ಎಂದು ಹೇಳಿ ಆಶೀರ್ವದಿಸಿದರು. ಅತಿಥಿಗಳಾಗಿ ಬಂದ ಶ್ರೀ ಕೆ.ಸಿ. ವರ್ಗೀಸ್ ಮಾತನಾಡಿ ಚಿಕ್ಕಂದಿನಲ್ಲಿ ಮಕ್ಕಳು ನಿಸರ್ಗದ ಪ್ರಜ್ಞೆ ಬೆಳೆಸಿಕೊಂಡು ಬರಲು ಸ್ಕೌಟ್ ಸಂಸ್ಥೆ ಕಲಿಸುತ್ತದೆ. ಮಕ್ಕಳ ಶಿಸ್ತು, ಸಂಯಮ ನೋಡಿ ಸಂತೋಷ ವ್ಯಕ್ತಪಡಿಸಿದರು. ಈ ಚಟುವಟಿಕೆಗಳಿಗೆ ಎಲ್ಲಾ ಸಹಾಯ ಸಹಕಾರ ನೀಡಿವುದಾಗಿ ತಿಳಿಸಿದರು. ಸಿ.ಬಿ.ಎಸ್.ಇ. ಮುಖ್ಯಾಧ್ಯಾಪಕಿ ಶ್ರೀಮತಿ ಜೆಸ್ಸಿ ಮೋಲ್ ಥೋಮಸ್ ಮಕ್ಕಳಲ್ಲಿ ದೈವಭಕ್ತಿ ಮತ್ತು ಸಂಘಟನೆ ಬೆಳೆಸಲು ಇದು ಸಹಾಯಕಾರಿ ಎಂದು ಹೇಳಿದರು. ಹಿರಿಯ ಶಿಕ್ಷಕಿಯರಾದ ಮಿಸ್ ಇಡಾಲಿನ್ ವಾಜ್ ರವರು ಮಾತನಾಡಿ ಶಿಸ್ತುಮಯ ಜೀವನ ನಡೆಸಲು ಈ ಚಳವಳಿಯು ಮುಖ್ಯ ಪಾತ್ರ ವಹಿಸುತ್ತದೆ ಎಂದು ಹೇಳಿ ಶುಭಕೋರಿದರು. ಜಿಲ್ಲಾ ಕಾರ್ಯದರ್ಶಿಯವರು ಮಾತನಾಡಿ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್ಸ್‌ಗಳು ನಿರಂತರ ವನಮಹೋತ್ಸವದ ಕಾರ್ಯಕ್ರಮದ ಬಗ್ಗೆ ಶ್ಲಾಘಿಸಿ ಉಳಿದವರಿಗೆ ಮಾದರಿಯಾಗಿದ್ದಾರೆಂದು ತಿಳಿಸಿದರು ಹಾಗೂ ಎಲ್ಲರನ್ನು ಅಭಿನಂದಿಸಿದರು.

## ಉಡುಪಿ

ದಿನಾಂಕ 18-07-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್, ಸಮಾವೇಶ ಹಾಗೂ ಪುನಶ್ಚೇತನ ತರಬೇತಿ ಶಿಬಿರ ಮಹಿಷಮರ್ಧಿನಿ ರೋಟರಿ ಸ್ಕೌಟ್ಸ್ ಸಭಾ ಭವನ ಕಡಿಯಾಳಿಯಲ್ಲಿ ಜರುಗಿತು. ಸಮಾವೇಶದ ಉದ್ಘಾಟನಾ ಸಮಾರಂಭ ಶ್ರೀ ಪಿ.ಆರ್. ನಾಯಕ್ ಜಿಲ್ಲಾ ಸಂಸ್ಥೆಯ ಹಿರಿಯ ಉಪಾಧ್ಯಕ್ಷರು, ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀಮತಿ ಶಾಂತಾ ವಿ. ಆಚಾರ್ಯ ರಾಜ್ಯ ಆಯುಕ್ತರು(ಗೈಡ್ಸ್) ಸಮಾವೇಶವನ್ನು ಉದ್ಘಾಟಿಸಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಸಹಕಾರಿಯಾಗಿದೆ ಎಂದು ತಿಳಿಸಿದರು.

ಶ್ರೀ ಮಂಜುನಾಥಯ್ಯ, ಉಡುಪಿ ತಾಲ್ಲೂಕು ಕಾರ್ಯ ನಿರ್ವಹಣಾಧಿಕಾರಿಯವರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ಸಂಸ್ಥೆಯ ನೂತನ ವೆಬ್‌ಸೈಟನ್ನು ಉದ್ಘಾಟಿಸಿ ಶಿಕ್ಷಕರು ವಿದ್ಯಾರ್ಥಿಗಳಲ್ಲಿ ಆತ್ಮವಿಶ್ವಾಸವನ್ನು

ಮೂಡಿಸಬೇಕು. ಆತ್ಮವಿಶ್ವಾಸ ಮತ್ತು ಕಠಿಣ ಪರಿಶ್ರಮದಿಂದ ಗುರಿ ತಲುಪಲು ಸಾಧ್ಯ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಿಂದ ಸಾಮಾಜಿಕ ಎಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಉಡುಪಿ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ ಶ್ರೀ ಸೀತಾನದಿ ವಿಠ್ಠಲ ಶೆಟ್ಟಿ, ಜಿಲ್ಲಾ ಶಿಕ್ಷಣಾಧಿಕಾರಿ ಶ್ರೀ ಅಶೋಕ್ ಕಾಮತ್ ಮಾತನಾಡಿ ಎಲ್ಲಾ ಶಾಲೆಗಳಲ್ಲೂ ಸ್ಕೌಟ್ಸ್-ಗೈಡ್ಸ್ ಚಳುವಳಿಗಳು ಪ್ರಾರಂಭವಾಗಬೇಕು ಹಾಗೂ ಮಕ್ಕಳಿಗೂ ಉತ್ತಮ ಚಟುವಟಿಕೆಗಳನ್ನು ನೀಡಬೇಕೆಂದು ಶಿಕ್ಷಕರುಗಳಿಗೆ ತಿಳಿಸಿದರು. ಇದೇ ಸಂದರ್ಭದಲ್ಲಿ ಹಿರಿಯ ಸ್ಕೌಟರ್ ದಿವಂಗತ ಬಿ.ಜಿ. ವಾರಂಬಳ್ಳಿ ಸ್ಮರಣಾರ್ಥ 2013-14 ನೇ ಅತ್ಯುತ್ತಮ ಸ್ಥಳೀಯ ಸಂಸ್ಥೆ ಪ್ರಶಸ್ತಿಯನ್ನು ಕುಂದಾಪುರ ಸ್ಥಳೀಯ ಸಂಸ್ಥೆಗೆ, ಅತ್ಯುತ್ತಮ ಸ್ಕೌಟ್ ಟ್ರೂಪ್ ಪ್ರಶಸ್ತಿಯನ್ನು ಕುಂದಾಪುರ ವೆಂಕಟ್ರಮಣ ಆಂಗ್ಲ ಮಾಧ್ಯಮ ಶಾಲಾ ಸ್ಕೌಟ್ ತಂಡಕ್ಕೆ, ಅತ್ಯುತ್ತಮ ಗೈಡ್ಸ್ ಪ್ರಶಸ್ತಿಯನ್ನು ಹೆಚ್.ಎಂ.ಎಂ. ಆಂಗ್ಲ ಮಾಧ್ಯಮ ಶಾಲೆ, ಗೈಡ್ಸ್ ತಂಡಕ್ಕೆ ನೀಡಲಾಯಿತು. ಈ ವರ್ಷದಲ್ಲಿ ರಾಜ್ಯ ಪುರಸ್ಕಾರ, ಸ್ಕೌಟ್-ಗೈಡ್ಸ್, ಹೀರಖ್ ಪಂಖ್ ಬುಲ್ ಬುಲ್, ಚತುರ್ಥ ಚರಣ ಕಬ್ಸ್ ಪ್ರಶಸ್ತಿಗಳನ್ನು ನೀಡಲಾಯಿತು.

ಬಿ.ಜಿ. ವಾರಂಬಳ್ಳಿಯವರ ಸ್ಮರಣಾರ್ಥ ಬಡ ವಿದ್ಯಾರ್ಥಿಗಳಿಗೆ ಸ್ಕೌಟ್ ಸಮವಸ್ತ್ರವನ್ನು ಶ್ರೀಮತಿ ಮೂಕಾಂಬಿಕಾ ವಾರಂಬಳ್ಳಿಯವರು ನೀಡಿದರು. ಜಿಲ್ಲಾ ಮುಕ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಎಡ್ವಿನ್ ಆಳ್ವ, ಉಪಾಧ್ಯಕ್ಷರಾದ ಶ್ರೀಮತಿ ಜ್ಯೋತಿ ಜೆ.ಪೈ, ಪ್ರೊ। ದಯಾನಂದ ಶೆಟ್ಟಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಕೊಗ್ಗಗಾಣಿಗ ಜಿಲ್ಲಾ ತರಬೇತಿ ಆಯುಕ್ತರು ಸ್ವಾಗತಿಸಿದರು. ಶ್ರೀ ಶೇಖರ್ ಪೂಜಾರಿ ಜಿಲ್ಲಾ ಕಾರ್ಯದರ್ಶಿ ಧನ್ಯವಾದ ನೀಡಿದರು. ಶ್ರೀ ವಿ.ಜಿ. ಬೈಕಾಡಿ ಕಾರ್ಯಕ್ರಮ ನಿರ್ವಹಿಸಿದರು.

ಶ್ರೀ ಕೆ.ಬಿ. ರಾವ್ ಜಿಲ್ಲಾ ಮುಖ್ಯ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ಜರುಗಿತು. ಮುಖ್ಯ ಅತಿಥಿಗಳಾಗಿ ಉಡುಪಿ ಕ್ಷೇತ್ರ ಶಿಕ್ಷಣಾಧಿಕಾರಿಯಾದ ಶ್ರೀ ರವಿಶಂಕರ್ ಭಾಗವಹಿಸಿ ಸಮಾಜದ ಅನಿಷ್ಠ ನ್ಯೂನತೆಗಳನ್ನು ಹೋಗಲಾಡಿಸಲು, ಸ್ಕೌಟಿಂಗ್-ಗೈಡಿಂಗ್ ಸಹಕಾರಿಯಾಗಿದೆ. ಆದ್ದರಿಂದ ಉಡುಪಿ ತಾಲೂಕಿನ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ದಳ ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸಿದರು. ಶ್ರೀ ರಾಜ ಗೋಪಾಲ ಆಚಾರ್ಯ ಸ್ಥಾನಿಯ ಆಯುಕ್ತರು ಹಾಗೂ ಇತರ ಪದಾಧಿಕಾರಿಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು.

## ಶಿವಮೊಗ್ಗ

ದಿನಾಂಕ 19-07-2014 ರಂದು ಸ್ಕೌಟರ್-ಗೈಡರ್ ಪುನಶ್ಚೇತನ ಶಿಬಿರವನ್ನು ಭದ್ರಾ ಪ್ರೌಢಶಾಲೆ, ಹಾಲಪ್ಪ ವೃತ್ತ, ಬಿ.ಹೆಚ್. ರಸ್ತೆ, ಭದ್ರಾವತಿಯಲ್ಲಿ ಹಮ್ಮಿಕೊಳ್ಳಾಗಿತ್ತು. ಅಧ್ಯಕ್ಷತೆಯನ್ನು ಶ್ರೀ ಎನ್. ನಾರಾಯಣಪ್ಪ, ಅಧ್ಯಕ್ಷರು ಸ್ಥಳೀಯ ಸಂಸ್ಥೆ, ಭದ್ರಾವತಿ ವಹಿಸಿಕೊಂಡಿದ್ದರು. ಶ್ರೀ ಜಿ.ಟಿ, ಗುರುಲಿಂಗಪ್ಪ ಕಾರ್ಯದರ್ಶಿಯವರು ಸ್ವಾಗತಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎನ್. ಸೋಮಶೇಖರಯ್ಯನವರು ಉದ್ಘಾಟಿಸಿದರು. ಉದ್ಘಾಟನಾ ನುಡಿಯಲ್ಲಿ ಬಿ.ಇ.ಓ., ರವರು ಎಲ್ಲಾ ಶಾಲೆಗಳಲ್ಲಿ ಕಡ್ಡಾಯವಾಗಿ ಸ್ಕೌಟ್ಸ್-ಗೈಡ್ಸ್ ದಳಗಳನ್ನು ಪ್ರಾರಂಭಿಸಬೇಕು. ಈ ಶಿಬಿರದ ಎಲ್ಲಾ ಮಾಹಿತಿಗಳನ್ನು ಚೆನ್ನಾಗಿ ತಿಳಿದುಕೊಂಡು ಮಕ್ಕಳಲ್ಲಿ ಶಿಸ್ತು, ಸಮಯಪಾಲನೆ, ನಾಯಕತ್ವದ ಗುಣಗಳು, ದೇಶಪ್ರೇಮವನ್ನು ಬೆಳೆಸಬೇಕೆಂದು ಹಾರೈಸುತ್ತ ಈ ಶಿಬಿರವು ಯಶಸ್ವಿಯಾಗಲೆಂದು ಹಾರೈಸಿದರು. ಇನ್ನೊಬ್ಬ ಅತಿಥಿಯಾದ ಶ್ರೀ ಡಿ. ಹೆಚ್. ಚಂದ್ರಶೇಖರ, ಮುಖ್ಯ ಶಿಕ್ಷಕರು, ಭದ್ರಾ ಪ್ರೌಢಶಾಲೆ ಹಾಲಪ್ಪ ವೃತ್ತ, ಇವರು ವಿದ್ಯಾರ್ಥಿಗಳಲ್ಲಿ ಶಿಸ್ತು,

ನಾಯಕತ್ವ ದೇಶಪ್ರೇಮದ ಗುಣಗಳು ಈ ಸ್ಕೌಟ್ಸ್-ಗೈಡ್ಸ್‌ಗಳಿಂದ ಬೆಳೆಯಲು ಸಾಧ್ಯ. ಶಿಕ್ಷಕ/ಶಿಕ್ಷಕಿಯರು ಈ ಶಿಬಿರದ ಮಾಹಿತಿಯನ್ನು ಪಡೆದುಕೊಂಡು ಶಾಲೆಗಳಲ್ಲಿ ಚೆನ್ನಾಗಿ ದಳಗಳನ್ನು ಪ್ರಾರಂಭಿಸಿ ಈ ಶಿಬಿರ ಯಶಸ್ವಿಯಾಗಲೆಂದು ಹಾರೈಸಿದರು. ನಂತರ ಶ್ರೀ ಟಿ. ರಾಮಚಂದ್ರ ಎಲ್ಲರಿಗೂ ವಂದಿಸಿದರು. ಈ ಶಿಬಿರಕ್ಕೆ ತಾಲೂಕಿನಿಂದ ಒಟ್ಟು 30 ಜನ ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

****************

ದಿನಾಂಕ 11-07-2014 ರಿಂದ 12-07-2014 ರ ವರೆಗೆ ಪೆಟ್ರೋಲ್ ನಾಯಕ/ನಾಯಕಿಯರ ತರಬೇತಿ ಶಿಬಿರವನ್ನು ಗಾಂಧಿ ಪಾರ್ಕ್ ನ್ಯೂಟೌನ್ ಭದ್ರಾವತಿಯಲ್ಲಿ ಹಮ್ಮಿಕೊಂಡಿದ್ದು. ಈ ಶಿಬಿರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎನ್. ನಾರಾಯಣಪ್ಪನವರು, ಅಧ್ಯಕ್ಷರು ಸ್ಥಳೀಯ ಸಂಸ್ಥೆ, ಭದ್ರಾವತಿ ವಹಿಸಿಕೊಂಡಿದ್ದರು. ಶ್ರೀ ಜಿ.ಟಿ. ಗುರುಲಿಂಗಪ್ಪ ಕಾರ್ಯದರ್ಶಿಯುವರು ಸ್ವಾಗತಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎನ್. ಸೋಮಶೇಖರಯ್ಯನವರು ಶಿಬಿರವನ್ನು ಉದ್ಘಾಟಿಸಿದರು ಅತಿಥಿಗಳಾಗಿ ಶ್ರೀಮತಿ ಪದ್ಮಾವತಿ ಶಿಬಿರದ ನಾಯಕಿಯರಾಗಿ, ಶ್ರೀ ಹೆಚ್. ಶಿವಶಂಕರ್, ಡಿ.ಟಿ.ಸಿ., ಶ್ರೀಮತಿ ಎ. ಅರುಣಮಾಲ ಡಿ.ಟಿಸಿ., (ಜಿ) ಶ್ರೀ ಸಿ.ಕೆ. ನಾಗೇಂದ್ರ ಚಾರ್ ಆಗಮಿಸಿದ್ದರು. ಅಧ್ಯಕ್ಷೀಯ ನುಡಿಗಳಲ್ಲಿ ನಾರಾಯಣಪ್ಪನವರು ಎಲ್ಲಾ ಸ್ಕೌಟ್ಸ್-ಗೈಡ್ಸ್, ಶಿಕ್ಷಕ-ಶಿಕ್ಷಕಿಯರು ಕಡ್ಡಾಯವಾಗಿ ಸಮವಸ್ತ್ರ ಧರಿಸಿ ಆಸಕ್ತಿಯಿಂದ ಶಾಲೆಗಳಲ್ಲಿ ದಳಗಳನ್ನು ನಡೆಸಿ ವರದಿಯನ್ನು ಕಳುಹಿಸಿಕೊಡುವಂತೆ ತಿಳಿಸಿದರು. ಕೊನೆಯದಾಗಿ ವಂದನೆಗಳನ್ನು, ಶ್ರೀ ಟಿ. ರಾಮಚಂದ್ರ ಸ್ಕೌಟ್ಸ್ ಮಾಸ್ಟರ್ ವಂದಿಸಿದರು. ಶ್ರೀ ಹೆಚ್. ಶಿವಶಂಕರ್, ಶ್ರೀ ಜಿ. ಸಿದ್ಧಪ್ಪ, ಶ್ರೀ ಎಂ.ಕೆ. ಕೃಷ್ಣಸ್ವಾಮಿ, ಶ್ರೀಮತಿ ಕೆ.ಆರ್. ಪರಿಮಳ ಶ್ರೀ ಟಿ. ರಾಮಚಂದ್ರ ಇವರುಗಳು ಒಟ್ಟು 100 ಸ್ಕೌಟ್ಸ್-ಗೈಡ್ಸ್‌ಗಳನ್ನು, 20 ಸ್ಕೌಟರ್-ಗೈಡರ್‌ಗಳನ್ನು 5 ತಂಡಗಳಾಗಿ ವಿಭಾಗಿಸಿ, ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಿದರು.

ದಿನಾಂಕ 12-07-2014 ರಂದು ಮುಂದುವರಿದ ಭಾಗಗಳ ಬಗ್ಗೆ ತರಬೇತಿ ನೀಡಿ. ಸಾಯಂಕಾಲ 3.30ಕ್ಕೆ ಸಮಾರೋಪ ಸಮಾರಂಭವು ಶ್ರೀ ನಾರಾಯಣಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಡಿ.ಹೆಚ್. ಶಿವಶಂಕರ್ ಎಲ್ಲರನ್ನು ಸ್ವಾಗತಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಪಿ. ಪದ್ಮಾವತಿ, ಶ್ರೀ ಸಿ.ಕೆ ನಾಗೇಂದ್ರ ಚಾರ್, ಶ್ರೀ ಮೋಹನ್, ರೋವರ್ ಸ್ಕೌಟ್ಸ್, ಶ್ರೀ ಎಂ.ಕೆ. ಕೃಷ್ಣಸ್ವಾಮಿ, ಶ್ರೀ ಬಿ.ಎಂ. ಜಯಾಚಾರ್ ಭಾಗವಹಿಸಿದ್ದರು. ಶ್ರೀ ಜಿ.ಟಿ. ಗುರುಲಿಂಗಪ್ಪನವರು ಎಲ್ಲರಿಗೂ ವಂದಿಸಿದರು.

## Bangalore North

Patrol Leaders and Sixers Camp was conducted On 20th July 2014 at Good Will Girls High School, Bangalore. Cubs, Bulbuls, Scouts-Guides Numbering 160 participated in the camp. Principal Mrs. Vani, Sri T.S. Lucas, State Commissioner (Scout) & Chairman of Shivajinagar L.A., Sri Rathnanjali Nicodus, President and Mrs. B. Revathy, D.T.C., were the Chief Guest.

Ms. Krupa Vijai A.L.T.(G), Secetary of S.L.A. Co-ordinated the Programme

.............. ಹಿಂದಿನ ಸಂಚಿಕೆಯಿಂದ

## ಅಧ್ಯಾಯ – 4 ಶಿಬಿರಾಗ್ನಿ ಉದಂತ ಸಂ–11

# ಮಾರ್ಗ ಶೋಧನೆ

# (TRACKING)

## ಕುರುಹುಗಳ ಅವಲೋಕನ

### ಕುರುಹುಗಳನ್ನು ಗಮನಿಸುವುದು – ಜನರ ವಿವರಗಳು – ಶವದ ಸುತ್ತಲಿನ ಕುರುಹುಗಳು – ಹಳ್ಳಿಗಾಡು ಪ್ರದೇಶದ ವಿವರಗಳು – ಸ್ಕೌಟುಗಳು ತಮ್ಮ ಕಣ್ಣು, ಕಿವಿ ಮತ್ತು ಮೂಗುಗಳನ್ನುಪಯೋಗಿಸುವುದು – ರಾತ್ರಿಯ ವೇಳೆಯ ಸ್ಕೌಟಿಂಗ್

**ಈ ವ್ಯಕ್ತಿಯನ್ನು ನೀವು ಕಂಡಿರಾ :**

ಒಂದು ಹೊಸ ಅಪರಿಚಿತ ನಗರದಲ್ಲಿ, ತನ್ನ ದಾರಿಯನ್ನು ಕಂಡುಕೊಳ್ಳಬೇಕಾದರೆ, ಸ್ಕೌಟಾದವನು ಅಲ್ಲಿನ ಕಟ್ಟಡಗಳನ್ನೂ, ಅಕ್ಕಪಕ್ಕದ ರಸ್ತೆಗಳನ್ನೂ, ಅಂಗಡಿಗಳನ್ನೂ, ಅವುಗಳ ಪ್ರದರ್ಶನ ಕಿಟಕಿಗಳಲ್ಲಿರುವ ಸಾಮಾನುಗಳನ್ನೂ ಎದುರಿಗೆ ಹಾದು ವಾಹನಗಳನ್ನೂ ನಡೆಯುತ್ತಾ ನಡೆಯುತ್ತಾ ಗಮನಿಸುತ್ತಾನೆ.

ಅವನು ಜನರನ್ನು ವಿಶೇಷವಾಗಿ ಗಮನಿಸುತ್ತಾನೆ. ಅವರ ಮುಖಚರ್ಯೆ; ಧರಿಸಿರುವ ಉಡಿಗೆತೊಡಿಗೆ; ಅವರ ಪಾದರಕ್ಷೆ; ನಡೆಯುವ ರೀತಿ ಇವುಗಳನ್ನು ಗಮನಿಸುತ್ತಾನೆ. ಸಮಯ ಬಂದಾಗ ಉದಾ: ಒಬ್ಬ ಪೋಲಿಸ್ ನವನು "ಕಪ್ಪಗೆ ಚಾಚಿಕೊಂಡಿರುವ ಕಣ್ಣು ಹುಬ್ಬಿನ ನೀಲಿಯ ಸೂಟ್ ಧರಿಸಿರುವ, ಒಬ್ಬ ವ್ಯಕ್ತಿಯು ಈ ಕಡೆ ಹೋದುದನ್ನು ಕಂಡಿರಾ?" ಎಂದು ಕೇಳಬಹುದು. ಅದಕ್ಕೆ ನೀವು "ಹಾ! ಕಂಡೆ. ಬಲಗಾಲು ಕುಂಟುತ್ತಿದ್ದ. ಅವನ ಬೂಟು ವಿದೇಶೀಯನವರಂತಿತ್ತು. ಕೈಯಲ್ಲೊಂದು ಪಾರ್ಸಲ್ ಇತ್ತು. ಈಗ 3 ನಿಮಿಷಗಳ ಕೆಳಗೆ, ಗೋಲ್ಡ್ ಸ್ಟ್ರೀಟ್‌ನಲ್ಲಿ ತಿರುಗಿದ. ಅಗೋ ಅಲ್ಲಿ ಎರಡನೆಯ ತಿರುವು" ಎಂದು ಹೇಳುವಂತಿರಬೇಕು.

ಅನೇಕ ವೇಳೆಗಳಲ್ಲಿ ಆ ರೀತಿಯ ವಿವರವು, ಅಪರಾಧಿಗಳನ್ನು ಕಂಡು ಹಿಡಿಯಲು ಬಹಳ ಸಹಾಯಕಾರಿ ಯಾಗಿದೆ.

'ಕಿಮ್'ನ ಕಥೆಯಲ್ಲಿ, ಸೂಕ್ಷ್ಮ ರೀತಿಯಲ್ಲಿ ಅವಲೋಕಿಸುವುದರ ಬಗ್ಗೆ ಕಿಮ್‌ಗೆ ಹೇಗೆ ಹೇಳಿಕೊಡಲಾಯಿತು, ನೆನೆಸಿಕೊಳ್ಳಿ, ಬೋಗುಣಿಯ



*ಹೇಗೆಂದು ತಿಳಿದಿದ್ದರೆ ನೀವು ಸರಳ ರೀತಿಯಲ್ಲಿ ನಿಮ್ಮ ವೇಷವನ್ನು ಸುಲಭವಾಗಿ ಬದಲಾಯಿಸಬಹುದು. ತನ್ನ ತೋರಿಕೆಯನ್ನು (Appearance) ಬದಲಾಯಿಸಿಕೊಳ್ಳಲು ಈ ವ್ಯಕ್ತಿಯು ಎಷ್ಟು ಅಂಶಗಳಲ್ಲಿ ಬದಲಾವಣೆ ಮಾಡಿದ್ದಾನೆ ? ವ್ಯಕ್ತಿಯು ಬದಲಾದಂತೆ ಕಾಣಲು ಅವನು ನಿಂತಿರುವ ಭಂಗಿಯೂ ಮುಖ್ಯ ಕಾರಣವಾಗಿದೆ.*

ತುಂಬಾ ಸಣ್ಣ ಸಣ್ಣ ವಸ್ತುಗಳನ್ನು, ಒಂದು ನಿಮಿಷ ಕಾಲ ಅವನಿಗೆ ತೋರಿಸಲಾಗುತ್ತಿದ್ದಿತು. ಬಳಿಕ ಅದನ್ನು ಮುಚ್ಚಿ, ಗಮನಿಸಿದ ವಸ್ತುಗಳನ್ನು ವಿವರಿಸಲು, ಅವನಿಗೆ ಹೇಳಲಾಗುತ್ತಿತ್ತು.

ಅವಲೋಕನೆಯನ್ನು ಕಲಿಸಲು, ಇದು ಅತ್ಯುತ್ತಮವಾದ ಅಭ್ಯಾಸವಾದ ಕಾರಣ ಸ್ಕೌಟುಗಳಿಗೆ ಈ 'ಕಿಂ'ನ ಆಟವನ್ನು ಆಡಿಸಲಾಗುತ್ತದೆ.

ಇಟಲಿಯಲ್ಲಿ "ಕಮೋರ್ರಾ" ಎಂಬ ಹೆಸರಿನ, ಕ್ರಾಂತಿಕಾರಿ ಸಮಾಜವಿದ್ದಿತು. ಅವರು ಅತಿ ವೇಗದಲ್ಲಿ ಅವಲೋಕಿಸುವ ಮತ್ತು ಕಂಡದ್ದನ್ನು ನೆನಪಿನಲ್ಲಿಟ್ಟುಕೊಳ್ಳುವ ಬಗ್ಗೆ, ಬಾಲಕರಿಗೆ ತರಬೇತಿ ನೀಡುತ್ತಿದ್ದರು. ನಗರದ ರಸ್ತೆಗಳಲ್ಲಿ, ಇದ್ದಕ್ಕಿದ್ದಂತೆ ನಿಂತು, ಕಮೋರಿಯು ತನ್ನ ಬಾಲಕನನ್ನು, ಹೀಗೆ ಪ್ರಶ್ನಿಸಬಹುದು.

"ಹಿಂದಿನ ರಸ್ತೆಯಲ್ಲಿ, ಬಲಗಡೆಯ, ನಾಲ್ಕನೆಯ ಮನೆಯ ಬಾಗಿಲಲ್ಲಿ, ಕುಳಿತಿದ್ದ ಹೆಂಗಸು, ಯಾವ ರೀತಿಯಲ್ಲಿ ಬಟ್ಟೆಯನ್ನು ಧರಿಸಿದ್ದಳು?" ಎಂದೋ, ಅಥವಾ

"ಮೂರು ರಸ್ತೆಗಳಿಗೆ ಮುಂಚೆ, ಆ ಮೂಲೆಯಲ್ಲಿದ್ದ ಇಬ್ಬರು ವ್ಯಕ್ತಿಗಳು ಏನೆಂದು ಮಾತನಾಡಿಕೊಳ್ಳುತ್ತಿದ್ದರು? ಎಂದೋ ಅಥವಾ



ಅನಂತರದಲ್ಲಿ ಗುರುತಿಸಲು ಸಾಧ್ಯವಾಗುವಂತೆ ಈ ಜನರ ಮುಖಗಳನ್ನು ಗಮನಿಸಿ.

"ಆ ಮನೆಯ ಎತ್ತರ ಎಷ್ಟು? ಅದರ ಮೊದಲ ಅಂತಸ್ತಿನಲ್ಲಿರುವ ಕಿಟಕಿಯ ಅಗಲ ಎಷ್ಟು?" ಎಂದು ಮುಂತಾಗಿ ಆ ಬಾಲಕನನ್ನು ಪ್ರಶ್ನಿಸುತ್ತಿದ್ದರು ಅಥವಾ ಆ ಬಾಲಕನಿಗೆ, ಒಂದು ನಿಮಿಷ ಕಾಲ ಅಂಗಡಿಯೊಂದರ ಪ್ರದರ್ಶನ ಕಿಟಕಿಯನ್ನು ನೋಡಲು ಬಿಟ್ಟು, ಅವನು ಗಮನಿಸಿದ ಎಲ್ಲವನ್ನೂ ವಿವರಿಸಲು ಹೇಳುತ್ತಿದ್ದರು. ಸ್ಕೌಟುಗಳೂ, ನಡೆಯುವಾಗ ನೆಲದ ಮೇಲೆ, ಹಾದಿಯಪಕ್ಕ ಮನೆಗಳ ಕಡೆ ಮತ್ತು ಮೋರಿಗಳ ಕಡೆ ಸಹ, ಗಮನ ಹರಿಸಬೇಕು.

ನಾನು ಅನೇಕ ವೇಳೆ, ಅಮೂಲ್ಯವಾದ ಒಡವೆಗಳು ಬಿದ್ದಿರುವುದನ್ನು ಗಮನಿಸಿದ್ದೇನೆ. ಅನೇಕರು ಕಂಡೂ ಕಾಣದಂತೆ, ಅವುಗಳನ್ನು ಪಕ್ಕಕ್ಕೆ ಒದ್ದುಕೊಂಡು ಹೋಗಿರುತ್ತಾರೆ.

ಪ್ರತಿ, ನಗರದ ಸ್ಕೌಟೂ ಸಹ, ಯಥಾ ರೀತಿಯಲ್ಲಿ, ಹತ್ತಿರದ ದವಾಖಾನೆ, ಪೋಲೀಸ್ ಸ್ಟೇಷನ್, ಡಾಕ್ಟರು, ಆಸ್ಪತ್ರೆ, ಅಗ್ನಿಶಾಮಕ ಠಾಣೆ, ಟೆಲಿಫೋನ್, ಆಂಬ್ಯುಲೆನ್ಸ್ ಇತ್ಯಾದಿ, ಇರುವ ದೊರಕುವ ಸ್ಥಳಗಳನ್ನು ತಿಳಿದುಕೊಂಡಿರಬೇಕು ಮತ್ತು ಮಾರ್ಗದರ್ಶನ ನೀಡುವಂತಿರಬೇಕು.

.....ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




"Remember, it is not what you have, but what you give that brings happiness. That is why, as members of our Great Movement, it is important for each one of you to try your hardest to become skillful with your hands, alert and ready in your minds and great of heart, so that by these means you may bring friendship and happiness to others and so gain it for Yourself."

**- Olave, Lady Baden -Powell**




**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-೫೬೦ ೦೦೨
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



2 ಜುಲೈ 2014ರಂದು ಕೋಲಾರ ಜಿಲ್ಲೆ ಬೇತಮಂಗಲ ಗ್ರಾಮೀಣ ಪ್ರೌಢಶಾಲೆಯಲ್ಲಿ ಜರುಗಿದ ಸ್ಕೌಟ್-ಗೈಡ್ ದಳಗಳ ಉದ್ಘಾಟನೆಯನ್ನು ಶ್ರೀ ಲಕ್ಷ್ಮೀನಾರಾಯಣ ಜಿಲ್ಲಾ ಪಂಚಾಯತ್ ಸದಸ್ಯರು ಮತ್ತು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ವಿ. ಶಂಕರಪ್ಪ ನೆರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಜಯಶ್ರೀ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಶ್ರೀ ನಂಜುಂಡಪ್ಪ, ಶ್ರೀ ಬಾಬು ಹಾಗೂ ಇತರರನ್ನು ಕಾಣಬಹುದು.



15 ಜುಲೈ 2014ರಂದು ತುಮಕೂರು ಜಿಲ್ಲೆ ನಾಮದಚಿಲುಮೆ ಅರಣ್ಯ ಪ್ರದೇಶದಲ್ಲಿ ಜರುಗಿದ ಪರಿಸರ ಅಧ್ಯಯನ ಶಿಬಿರದಲ್ಲಿ ಅರಣ್ಯ ಇಲಾಖೆಯ ರೇಂಜ್ ಆಫೀಸರ್ ಶ್ರೀ ನರಸಿಂಹ ಮೂರ್ತಿಯವರು ಹಾಗೂ ಶ್ರೀ ಪ್ರಕಾಶ್ ಸ್ಕೌಟ್ಸ್-ಗೈಡ್ಸ್‌ಗಳಿಗೆ ವಿವಿಧ ಸಸಿಗಳನ್ನು ಬೆಳಸುವ ಬಗ್ಗೆ ಮಾಹಿತಿ ನೀಡಿದರು.



14 ಜುಲೈ 2014ರಂದು ಬಾಗಲಕೋಟೆ ಜಿಲ್ಲೆ ಬದಾಮಿ ತಾಲೂಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಶ್ರೀ ಎ.ಎಂ. ವಡಗೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಉದ್ಘಾಟಿಸಿದರು. ಚಿತ್ರದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.




ಇತ್ತೀಚೆಗೆ ಚಿಕ್ಕಮಗಳೂರು ಜಿಲ್ಲಾ ಸ್ಕೌಟ್ ಭವನದಲ್ಲಿ ಜರುಗಿದ 2013–14ನೇ ಸಾಲಿನಲ್ಲಿ ರಾಜ್ಯ ಪುರಸ್ಕಾರ ಪಡೆದ ವಿದ್ಯಾರ್ಥಿಗಳಿಗೆ ಜಿಲ್ಲಾ ಸಂಸ್ಥೆ ವತಿಯಿಂದ ಪ್ರಶಸ್ತಿ ವಿತರಣ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡುತ್ತಿರುವುದು. ಚಿತ್ರದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



1 ರಿಂದ 7 ಜುಲೈ 2014ರವರೆಗೆ ಹಾಸನದಲ್ಲಿ ಜರುಗಿದ ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂಧಿ ವರ್ಗ.



ಇತ್ತೀಚೆಗೆ ಯಾದಗಿರಿಯಲ್ಲಿ ಜರುಗಿದ ಪರಿಸರ ದಿನಾಚರಣೆ ಪ್ರಯುಕ್ತ ಸಾರ್ವಜನಿಕ ಶಿಕ್ಷಣ ಇಲಾಖೆ ಕಛೇರಿ ಆವರಣದಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ ಸಸಿಗಳನ್ನು ನೆಡಲಾಯಿತು. ಚಿತ್ರದಲ್ಲಿ ಶ್ರೀ ಡಿ.ಎಂ. ಹೊಸಮನಿ, ಪ್ರಭಾರಿ ಉಪನಿರ್ದೇಶಕರು, ಶ್ರೀ ವೆಂಕೋಬ, ವಿಷಯ ಪರಿವೀಕ್ಷಕರು, ಶ್ರೀ ಸಿನ್ನೂರ, ದೈಹಿಕ ಶಿಕ್ಷಣಾಧಿಕಾರಿ, ಶ್ರೀ ರಾಘವೇಂದ್ರ, ಡಿ.ಓ.ಸಿ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.

**Regd. as News Paper (Magazine) RNI No : 13348/1959. Postal Regd. No KA/BGW-549/2012-2014**
**Permitted to Post under WPP System. Vide No.: WPP-87.**
**Posted at: Mail Business Centre, Bangalore GPO on 25, 28 & 30 of every month (No. of Pages : 4+20=24)**


20 ಜುಲೈ 2014ರಂದು ಹಾಸನ ಜಿಲ್ಲೆ ಅರಸೀಕೆರೆ ಸರ್ಕಾರಿ ಬಾಲಕಿಯರ ಪ್ರೌಢಶಾಲೆಯಲ್ಲಿ ನಡೆದ ಉಚಿತ ತಪಾಸಣಾ ಶಿಬಿರದಲ್ಲಿ ಸ್ವಯಂ ಸೇವಕರಾಗಿ ಭಾಗವಹಿಸಿದ ಗೈಡ್ಸ್‌ಗಳು.


ಕಾರವಾರ ಜಿಲ್ಲೆ ಹೊನ್ನಾವರ ಮಾರ್ಥೋಮಾ ಶಾಲೆಯಲ್ಲಿ ಜರುಗಿದ ವನಮಹೋತ್ಸವ ಕಾರ್ಯಕ್ರಮ.



26 ಜೂನ್ 2014ರಂದು ವಿಜಾಪುರ ರೈಲು ನಿಲ್ದಾಣದಲ್ಲಿ ಜರುಗಿದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ ಗೈಡ್ಸ್‌ಗಳು.


05 ಜೂನ್ 2014ರಂದು ಚಾಮರಾಜನಗರ ಜಿಲ್ಲೆ ಕೊಳ್ಳೆಗಾಲ ತಾಲ್ಲೂಕು ಅಜ್ಜಿಪುರ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಜರುಗಿದ ವನಮಹೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿದ ಗೈಡ್ಸ್‌ಗಳು.


20 ರಿಂದ 21 ಜೂನ್ 2014ರಂದು ಉಡುಪಿಯಲ್ಲಿ ಜರುಗಿದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸ್ವಯಂ ಸೇವೆ ಸಲ್ಲಿಸಿದ ರೋವರ್ಸ್ ರೇಂಜರ್ಸ್‌ಗಳು.



SCOUTS®
Creating a Better World

If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**